KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಮಾರ್ಚ್ ೨೨, ೨೦೦೭ (ಚೈತ್ರ ೧, ಶಕ ವರ್ಷ ೧೯೨೯) | ಸಂಚಿಕೆ ೧೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ**

**ಬಿ3: ಅಮೊ: ವಾಹನ: 06/04-05, ದಿನಾಂಕ:17ನೇ ಫೆಬ್ರವರಿ 2007.**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿಗಳು,
ಹೊಸನಗರ ವಲಯ, ಹೊಸನಗರ
(ಸಹಾಯಕ ಸರ್ಕಾರಿ ಅಭಿಯೋಜಕರು)

**ವಾಹನ ಮಾಲೀಕರು** : ಶ್ರೀ ಏಕನಾಥ ಬಿನ್ ದಾಮೋದರ್ ನಾಯಕ್,
ವಿಘ್ನೇಶ್ವರ ಇಂಜಿನಿಯರಿಂಗ್ ನೆಹರು ರಸ್ತೆ,
ಹೊಸನಗರ.
(ಶ್ರೀ ಟಿ.ಬಿ. ಮಂಜುನಾಥ ಶೆಟ್ಟಿ, ವಕೀಲರು)

**ಪ್ರಸ್ತಾವನೆ:**

ದಿ: 02-08-2004ರಂದು ಹೊಸನಗರ ವಲಯದ ಕಸಬಾ ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ಸೇರಿಕೊಂಡು ಹೊಸನಗರ ತಾಲ್ಲೂಕು ಕಸಬಾ ಹೋಬಳಿ ಜೇನಿ ಗ್ರಾಮದ ಸರ್ವೆ ನಂ: 76ರಲ್ಲಿ ಇರುವ ಗುಡ್ಡೆ ಬಸವಣ್ಣನ ದೇವಸ್ಥಾನದ ಪಕ್ಕದಲ್ಲಿರುವ ಕಾಡಿನಲ್ಲಿ ಗಸ್ತು ಮಾಡುತ್ತಿರುವಾಗ ಒಂದು ವಾಹನ ಸುಮಾರು 10 ಗಂಟೆ ಸಮಯದಲ್ಲಿ ಬರುತ್ತಿರುವ ಶಬ್ದ ಕೇಳಿ ವಾಹನ ಸ್ವರಾಜ್ ಮಜದಾ ಕೆಎ-28-1375ನ್ನು ತಡೆದು ನಿಲ್ಲಿಸಿದಾಗ ಇಲಾಖೆಯವರು ನಿಂತ ಸ್ಥಳದಿಂದ ಸ್ವಲ್ಪ ದೂರ ಹಿಂದೆಯೇ ವಾಹನ ನಿಲ್ಲಿಸಿ ಅದರಿಂದ ಆಸಾಮಿಗಳು ಇಳಿದು ಓಡಲು ಪ್ರಾರಂಭಿಸಿದಾಗ ಇಲಾಖೆಯವರು ಬೆನ್ನಟ್ಟಿ ಇಬ್ಬರನ್ನು ಹಿಡಿದು ಉಳಿದವರು ಕೈಗೆ ಸಿಗದೆ ಪರಾರಿಯಾಗಿರುತ್ತಾರೆ. ಸದರಿ ವಾಹನವನ್ನು ಪರಿಶೀಲಿಸಲಾಗಿ ವಾಹನದ ಒಳಗಡೆ 9 ಬೀಟೆ ತುಂಡುಗಳಿದ್ದು, ಈ ಬೀಟೆ ತುಂಡುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ, ಸಾಗಿಸಲು ರಹದಾರಿಯಾಗಲಿ ಇರಲಿಲ್ಲವೆಂದು ಹಿಡಿದ ಇಬ್ಬರು ಆಸಾಮಿಗಳಾದ 1) ದೇವೇಂದ್ರ ಬಿನ್ ಗೋವಿಂದಪ್ಪ, ವರ್ಷ 40, ಎ.ಕೆ. ರಸ್ತೆ, ಹೊಸನಗರ 2) ಸೋಮಣ್ಣ ಬಿನ್ ಶೇಖರಪ್ಪ ವರ್ಷ 45, ಶಿಕಾರಿಪುರ ತಾಲ್ಲೂಕು ಅಡಗಂಟಿ ಗ್ರಾಮ, ಶಿಕಾರಿಪುರ ತಾಲ್ಲೂಕು, ಓಡಿಹೋದವರು (1) ನಾಗರಾಜ್ ಬಿನ್ ಈಶ್ವರಗೌಡ, 38 ವರ್ಷ, ಮಂಡ್ರಿ ವಾಸಿ, ಹೊಸನಗರ ತಾಲ್ಲೂಕು (2) ಮಲ್ಲಿಕ್ ಗೌಡ ಬಿನ್ ಈಶ್ವರಗೌಡ, 27 ವರ್ಷ, ಮಂಡ್ರಿ ವಾಸಿ, ಹೊಸನಗರ ತಾಲ್ಲೂಕು ಎಂದು ತಿಳಿಸಿದರು. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಅರಣ್ಯ ಉತ್ಪನ್ನ ಮತ್ತು ಆಸಾಮಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 104ಎ, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಉಲ್ಲಂಘನೆಯಾದ್ದರಿಂದ ಹೊಸನಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 23/2004-05ನ್ನು ದಾಖಲಿಸಿ ನಂತರ ಆಸಾಮಿಯನ್ನು ಜೆಎಂಎಫ್‌ಸಿಗೆ ಒಪ್ಪಿಸಿದೆ. ವಾಹನವನ್ನು ಅಧಿಕೃತ ಅಧಿಕಾರಿ

ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಾಹನವನ್ನು ಸುರಕ್ಷೆತೆಗಾಗಿ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಬಗ್ಗೆ ಶ್ರೀ ಏಕನಾಥ ಬಿನ್ ದಾಮೋದರ್ ನಾಯಕ್, ವಿಘ್ನೇಶ್ವರ ಇಂಜಿನಿಯರಿಂಗ್ ನೆಹರು ರಸ್ತೆ, ಹೊಸನಗರ ಇವರು ಮಾನ್ಯ ಶ್ರೀ ಟಿ.ಬಿ. ಮಂಜುನಾಥ ಶೆಟ್ಟಿ, ವಕೀಲರು, ಸಾಗರ ಇವರ ಮುಖಾಂತರ ದಿ: 04.08.2004ರಂದು ಈ ನ್ಯಾಯಾಲಯಕ್ಕೆ ಮನವಿ ಅರ್ಜಿ ಸಲ್ಲಿಸಿ ವಾಹನ ಕೆಎ–28–1375ನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರಿಗೆ ದಿ: 06–08–2004ರಂದು ಕಾರಣ ಕೇಳಿ ಪತ್ರ ಜಾರಿಮಾಡಿರುತ್ತದೆ. ಮತ್ತು ಇವರ ಮಧ್ಯಂತರ ಅವಧಿಗೆ ವಾಹನವನ್ನು ಬಿಟ್ಟುಕೊಡಲು ಕೋರಿದ ಅರ್ಜಿಯನ್ನು ಈ ನ್ಯಾಯಾಲಯದ ಸಮ ಸಂಖ್ಯೆಯ ಆದೇಶ ದಿ: 15.12.2004ರಂದು ತಿರಸ್ಕರಿಸಿ ಆದೇಶ ಹೊರಡಿಸಿದೆ.

ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಎಂ.ಸಿ. ಸುಣಗಾರ್, ವನಪಾಲಕರು, ಹೊಸನಗರ ವಲಯ ಇವರನ್ನು ದಿ:18.02.2006ರಂದು ಕರೆಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ ದಿ: 02–08–2004ರಂದು ಬಂದ ವರ್ತಮಾನದ ಮೇರೆಗೆ ನಾನು ಇತರೆ ಸಿಬ್ಬಂದಿಯವರೊಂದಿಗೆ ಗಸ್ತು ಮಾಡುತ್ತಿರುವಾಗ ಜೇನಿ ಸರ್ವೆ ನಂ: 76ರ ಬಸವಣ್ಣ ದೇವಸ್ಥಾನದ ಪಕ್ಕದಲ್ಲಿ ಬಂದ ವಾಹನವನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ 4 ಜನರಿದ್ದು, 2 ಜನ ಓಡಿ ಹೋಗಿದ್ದು, 2 ಜನರನ್ನು ಹಿಡಿದೆವು ಮತ್ತು ವಾಹನವನ್ನು ಪರಿಶೀಲಿಸಿ ನೋಡಿದಾಗ ಅದರಲ್ಲಿ ಹಸಿ ಬೀಟೆ ತುಂಡುಗಳಿದ್ದು, ವಾಹನ ಕೆಎ–28–1375 ಆಗಿದ್ದು ಎಂಓ–1ನ್ನು ಹಾಗೂ ಬೀಟೆ ತುಂಡುಗಳನ್ನು ಸ್ಥಳದಲ್ಲಿ ನಿಪಿ–1ರಂತೆ ಮಹಜರ್ ಮಾಡಿ ಅಮಾನತ್ತು ಪಡಿಸಿಕೊಂಡೆವು. ನಿಪಿ–1ಕ್ಕೆ ನನ್ನ ಸಹಿ ಇದೆ. ಮಹಜರನ್ನು ನನ್ನ ಉತ್ತಲೇಖನದಲ್ಲಿ ವನಪಾಲಕ ಕುಬೇರನಾಯ್ಕ ಬರೆದಿದ್ದಾರೆ. ತುಂಡುಗಳ ಮೇಲೆ ಇಲಾಖಾ ಛಾಪಾ ಹಾಕಿದೆವು. ಅರಣ್ಯ ಮೊಕದ್ದಮೆ ನಂ: 23/2004ನ್ನು ದಾಖಲಿಸಿ ನಂತರ 2 ಜನ ಆಸಾಮಿಗಳನ್ನು ರಿಮ್ಯಾಂಡ್ ಅರ್ಜಿಯೊಂದಿಗೆ ನ್ಯಾಯಾಲಯಕ್ಕೆ ವಾಹನವನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿದೆ. ನಿಪಿ–3 ಜಪ್ತಿ ವರದಿ ಇದೆ. ತುಂಡುಗಳನ್ನು ಬಣ್ಣ, ಗುಣಧರ್ಮ, ಇಲಾಖಾ ಅನುಭವದಿಂದ ಬೀಟೆ ಅಂತ ಖಚಿತ ಪಡಿಸಿಕೊಂಡೆವು. ಮಹಜರ್ ಸಮಯದಲ್ಲಿ ಖಾಸಗಿ ಪಂಚರು ಇರಲಿಲ್ಲ. ಎಂಓ–1 ವಾಹನ ಗುರುತಿಸುತ್ತೇನೆ. ವಾಹನವು ಅಕ್ರಮ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದರಿಂದ ಎಂಓ–1 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ. ಪಾಟೀ ಸವಾಲು ಟಿ.ಬಿ.ಎಂ. ವಕೀಲರಿಂದ ಸರ್ವೆ ನಂ: 76ರ ಖಾತೆ ನಂ ಯಾರ ಹೆಸರಿಗೆ ಇದೆ ಎನ್ನುವುದನ್ನು ನಾನು ನೋಡಿಲ್ಲ. ಆ ದಿನ ವಾಹನ ಜೇನಿ ಕಡೆಯಿಂದ ಹೊಸನಗರಕ್ಕೆ ಬರುತ್ತಿತ್ತು. ಜೇನಿಯಲ್ಲಿ ಸುಮಾರು 100 ಮನೆಗಳಿವೆ. ಬೀಟೆಯು ಅನೇಕ ಕಡೆ ಖಾಸಗೀ ಪ್ರದೇಶದಲ್ಲಿಯೂ ಬೆಳೆಯುತ್ತದೆ ನಿಜ. ನಾವು ಜಪ್ತಿ ಮಾಡಿದ ಬೀಟೆ ತುಂಡುಗಳನ್ನು ಸರ್ಕಾರಿ ಕಾಡಿನ ಮರದಿಂದ ತಯಾರಿಸಿದ್ದಾಗಿದೆ. ಕಡಿದಿರುವ ಬೀಟೆ ಮರದ ಪಕ್ಕದಲ್ಲಿ ಬುಡದ ಚೆಕ್ಕುಬಂದಿ ಬರೆದಿಲ್ಲ. ಸ್ಥಳದಲ್ಲಿ ಯಾವುದೇ ಗುಂಡಿ ಕೊಯ್ತು ಮಾಡಿರುವುದಿಲ್ಲ. ನಾವು ಮಹಜರ್‌ನಲ್ಲಿ ಬುಡದ ಅಳತೆ ಮಾತ್ರ ನಮೂದಿಸಿದ್ದು, ಆ ದಿನ ಸಿಕ್ಕ ವಾಹನ ಚಾಲಕ ದೇವೇಂದ್ರ ಎಂಬುವವನ ಮೇಲೆ ಪ್ರಕರಣ ದಾಖಲಿಸಿದೆ. ಏಕನಾಥ ಎಂಬುವವನನ್ನು ನಾನು ನೋಡಿಲ್ಲ. ಈ ಲಾರಿಯು ಏಕನಾಥನಿಗೆ ಸೇರಿದ ವಾಹನವೆಂದು ನನಗೆ ತಿಳಿದಿಲ್ಲ. ಸದರಿ ಜಪ್ತಿ ಮಾಡಿದ ಬೀಟೆ ತುಂಡು ಕುಮಾರ್ ಎಂಬುವವರ ಹಿತ್ತಲಲ್ಲಿ ಬೆಳೆದ ಮರಗಳು ಎಂಬ ಮಾಹಿತಿ ನನಗಿಲ್ಲ. ಈ ಬಗ್ಗೆ ತಪಾಸಣೆ ಮಾಡಲಿಲ್ಲ. ಏಕನಾಥನಿಗೆ 3 ದಿನದ ಹಿಂದೆ ಕಾಯಿಲೆ ಇದ್ದ ಕಾರಣ ದೇವೇಂದ್ರನೆಂಬ ಹಂಗಾಮಿ ಚಾಲಕನನ್ನು ನೇಮಿಸಿದ ಬಗ್ಗೆ ನನಗೆ ಗೊತ್ತಿಲ್ಲ. ಸದರಿ ಜಪ್ತಾದ ಬೀಟೆ ತುಂಡು ಅರಣ್ಯದಿಂದ ತಂದಿದ್ದಲ್ಲ, ಸರ್ವೆ ನಂಬರ್‌ನಿಂದ ತಂದ ತುಂಡೆಂದರೆ ಸರಿಯಲ್ಲ. ಏಕನಾಥ ಈ ಪ್ರಕರಣದಲ್ಲಿ ಭಾಗಿಯಾಗಿದ್ದಾನೆಯೇ ಇಲ್ಲವೇ ಎಂದು ನನಗೆ ಗೊತ್ತಿಲ್ಲ.

ಡಿಫೆನ್ಸ್ ಸಾಕ್ಷಿ ಶ್ರೀ ಏಕನಾಥ ಇವರನ್ನು ದಿ: 06–07–2006ರಂದು ಓಥ್ ಕಮಿಷನರ್, ಜೆಎಂಎಫ್‌ಸಿ, ಸಾಗರ ಇಲ್ಲಿ ಪ್ರಮಾಣ ಪತ್ರ ತಯಾರಿಸಿ ಈ ನ್ಯಾಯಾಲಯಕ್ಕೆ ಒಪ್ಪಿಸಿರುತ್ತಾರೆ. ಅದರಲ್ಲಿ ತಿಳಿಸಿದಂತೆ ಏಕನಾಥ ಆದ ನಾನು ಪ್ರಮಾಣ ಮಾಡಿ ಸತ್ಯ ಪ್ರತಿಜ್ಞೆ ಮೇಲೆ ಹೇಳುವುದೆಂದರೆ ನಾನು ಹೊಸನಗರದಲ್ಲಿ ಇಂಜಿನಿಯರಿಂಗ್ ವರ್ಕ್‌ಶಾಪ್ ಮಾಡಿಕೊಂಡು ಜೀವನ ಮಾಡುತ್ತಿದ್ದೇನೆ. ಫೈನಾನ್ಸ್‌ನಿಂದ ಸಾಲ ಮಾಡಿ ದಿ: 17–05–2004ರಂದು ಒಂದು ಸ್ವರಾಜ್ ಮಜದಾ ವ್ಯಾನ್ ನಂ: ಕೆಎ–28–1375ನ್ನು ಖರೀದಿಸಿದ್ದೆಂದು, ಬಾಡಿಗೆಗೆ ಓಡಿಸುತ್ತಾ ನ್ಯಾಯವಾಗಿ ಜೀವನ ನಡೆಸುತ್ತಾ ಬಂದಿದ್ದೇನೆಂದು, ದಿ: 01.08.2004ರ ಒಂದು ವಾರ ನನಗೆ ಆರೋಗ್ಯ ಸರಿ ಇಲ್ಲದ ಕಾರಣ ದೇವೇಂದ್ರ ಎನ್ನುವ ಹಂಗಾಮಿ ಚಾಲಕನನ್ನು ಲಾರಿಗೆ ನೇಮಿಸಿಕೊಂಡಿದ್ದೆನೆಂದು, ದಿ:01–08–2004ರಂದು ಒಂದು ಲೋಡ್ ಬೋಲ್ಡ್‌ರಸ್ ಕಲ್ಲು ಕಾಳಿಕಾಪುರದಿಂದ ಶಿಕಾರಿಪುರದ ಮಲ್ಲಿಕಾ ಎಂಬುವವರಿಗೆ ಬಾಡಿಗೆ ಹೊಡೆಯಲು ರಾತ್ರಿ ಲೋಡ್ ಮಾಡಿ ಬೆಳಿಗ್ಗೆ ತೆಗೆದುಕೊಂಡು ಹೋಗಲು ಸಂಜೆ 6 ಗಂಟೆಗೆ ವ್ಯಾನ್ ಅರ್ಜಿದಾರರಿಂದ ತೆಗೆದುಕೊಂಡು ಹೋಗಿದ್ದೆಂದು, ಮಾರನೆ ದಿನ ಬೆಳಿಗ್ಗೆ ಸುಮಾರು 11 ಗಂಟೆ ಸಮಯದಲ್ಲಿ ಸದರಿ ವ್ಯಾನನ್ನು ಅರಣ್ಯ ಇಲಾಖೆಯವರು ಜಪ್ತಿ ಮಾಡಿರುವುದಾಗಿ, ಅದರಲ್ಲಿ 8 ಬೀಟೆ ಮಂಚದ ತುಂಡುಗಳಿರುವುದಾಗಿ ಅರ್ಜಿದಾರರಿಗೆ ತಿಳಿದುಬಂದಿದ್ದೆಂದು, ದೇವೇಂದ್ರಪ್ಪನ ಮೇಲೆ ಸರ್ಕಾರದಿಂದ ಬೀಟೆ ತುಂಡುಗಳನ್ನು ಪರವಾನಿಗೆ ಇಲ್ಲದೇ ಸಾಗಿಸಿದ್ದಕ್ಕೆ ಕೇಸು ದಾಖಲಿಸಿದ್ದಾರೆಂದು, ಅರ್ಜಿದಾರರಿಗೆ ದೇವೇಂದ್ರಪ್ಪ ಲಾರಿಯಲ್ಲಿ ಬೀಟೆ ತುಂಡು ಸಾಗಿಸಿದ ಬಗ್ಗೆ ಮಾಹಿತಿ ಇಲ್ಲವೆಂದು, ಅರ್ಜಿದಾರರು ಮುಗ್ದರೆಂದು, ಹಂಗಾಮಿ ಡ್ರೈವರ್ ಮಾಡಿದ ತಪ್ಪಿಗೆ ಅರ್ಜಿದಾರರಿಗೆ ಶಿಕ್ಷೆ ರೂಪದಲ್ಲಿ ವಾಹನ ಮುಟ್ಟುಗೋಲು ಹಾಕಿಕೊಂಡಲ್ಲಿ ಅರ್ಜಿದಾರರಿಗೆ ತುಂಬಾ ಅನ್ಯಾಯವಾಗುತ್ತದೆಂದು, ಈಗಾಗಲೇ ಸದರಿ ವ್ಯಾನ್ ಬಿಸಿಲು, ಮಳೆಗೆ ಹಾಳಾಗಿರುತ್ತದೆಂದು, ನಿರಪರಾಧಿಯಾದ ಅರ್ಜಿದಾರರು ನನಗೆ ವಾಹನ ಬಿಟ್ಟುಕೊಡಲು ಮತ್ತು ಮುಂದೆ ನಾನೇ ಖುದ್ದಾಗಿ ವಾಹನ ಓಡಿಸಿ ನಿಗಾ ವಹಿಸುತ್ತೇನೆಂದು ಪ್ರಮಾಣ ಮಾಡಿರುತ್ತಾರೆ. ಸಾಕ್ಷಿಯನ್ನು ದಿ: 15–07–2006ರಂದು ಪುನಃ ಕರೆಸಿ ಪಾಟೀ ಸವಾಲು ಸಹಾಯಕ ಸರ್ಕಾರಿ ಅಭಿಯೋಜಕರಿಂದ ಗಜಾನನ ವರ್ಕ್ ಶಾಪ್ ನನ್ನ ತಂದೆಗೆ, ವಿಘ್ನೇಶ್ವರ ವರ್ಕ್‌ಶಾಪ್ ನನ್ನ ತಮ್ಮನಿಗೆ ಸೇರಿದ್ದಾಗಿದೆ. ನಾನು ಒಂದು ವ್ಯಾನನ್ನು ಇಟ್ಟುಕೊಂಡು ಸ್ವತಃ ಓಡಿಸುತ್ತಿದ್ದೆ. ನನಗೆ ಹುಷಾರಿಲ್ಲದಾಗ ದೇವೇಂದ್ರ ಎಂಬ ವಾಹನ ಚಾಲಕನನ್ನು ಗಾಡಿ ಓಡಿಸಲು ನೇಮಿಸುತ್ತಿದ್ದೆ. ನಾನು ವಾಹನದ ಸಾಲ

ತೀರಿಸಲು ಹಣದ ಅವಶ್ಯಕತೆ ತುಂಬಾ ಇದ್ದುದ್ದರಿಂದ ನನ್ನ ಚಾಲಕನನ್ನು ನೇಮಿಸಿ ಅರಣ್ಯದ ಮರದ ತುಂಡನ್ನು ಹೆಚ್ಚಿನ ಲಾಭಕ್ಕೋಸ್ಕರ ಸಾಗಾಣಿಕೆಗೆ ಕಳಿಸಿದ್ದೆನು ಎಂಬುದು ನಿಜವಲ್ಲ. ನನ್ನ ಚಾಲಕ ಮಾಡಿದ ಕೃತ್ಯ ನನಗೆ ಗೊತ್ತಿಲ್ಲವೆಂದು ಅರಣ್ಯ ಇಲಾಖೆಗೆ ತಿಳಿಸಿಲ್ಲ. ನಾನು ಸದರಿ ವಾಹನ ಚಾಲಕನಾದ ದೇವೇಂದ್ರನನ್ನು ಸದರಿ ಕೃತ್ಯವನ್ನು ಎಸಗಲು ಕಳುಹಿಸಿ ಈಗ ವಾಹನ ಬಿಡಿಸಿಕೊಳ್ಳಲು ಸುಳ್ಳು ಹೇಳುತ್ತಿದ್ದೇನೆಂದರೆ ಸರಿಯಲ್ಲ.

ದಿ: 02–12–2006ರಂದು ಡಿಫೆನ್ಸ್ ಕಡೆಯಿಂದ ಶ್ರೀ ಟಿ.ಬಿ. ಮಂಜುನಾಥ ಶೆಟ್ಟಿ, ವಕೀಲರು ಲಿಖಿತ ವಾದ ಮಂಡಿಸಿ ಬಾಧ್ಯತೆದಾರರು ಹೊಸನಗರದಲ್ಲಿ ಇಂಜಿನಿಯರಿಂಗ್ ವರ್ಕ್ ಶಾಪ್ ಮಾಡಿಕೊಂಡು ಕಷ್ಟದಿಂದ ದುಡಿದ ಹಣದಲ್ಲಿ ಒಂದು ಸ್ವರಾಜ್ ಮಜದಾ ಮಿನಿ ಲಾರಿಯನ್ನು ತೆಗೆದುಕೊಂಡಿರುತ್ತಾರೆಂದು, ಹಂಗಾಮಿ ಚಾಲಕನನ್ನು ನೇಮಿಸಿ ಬಾಡಿಗೆಗೆ ನಡೆಸಿಕೊಂಡು ಗೌರವದಿಂದ ಜೀವನ ನಡೆಸುತ್ತಿದ್ದರೆಂದು, ದಿ: 01–08–2004ರಂದು ಸಂಜೆ 6 ಗಂಟೆಯ ಸಮಯದಲ್ಲಿ ವಾಹನ ಚಾಲಕ ದೇವೇಂದ್ರ ಕಾಳಿಕಾಪುರ ಕಲ್ಲಿನ ಕೋರೆಯಿಂದ ಕಲ್ಲು ಸೈಜುಗಳನ್ನು ಶಿಕಾರಿಪುರಕ್ಕೆ ತೆಗೆದುಕೊಂಡು ಹೋಗಲು ಬಾಡಿಗೆ ಇದೆಯೆಂದು ಲಾರಿ ತೆಗೆದುಕೊಂಡು ಹೋಗಿದ್ದರೆಂದು, ಮಾರನೆ ದಿನ ಬೆಳಿಗ್ಗೆ ವಾಹನದಲ್ಲಿ ಕಲ್ಲಿನ ಜೊತೆ ಜೇನಿ ಗ್ರಾಮದ ಕುಮಾರ್ ಎನ್ನುವವರ ಸರ್ವೆ ನಂ: 53ರಿಂದ ಕಡಿದ ಕೆಲವು ಬೀಟೆ ತುಂಡುಗಳನ್ನು ಆತ ಸಾಗಿಸುತ್ತಿದ್ದನೆಂದು, ಗುಡ್ಡೆ ಬಸವಣ್ಣನ ದೇವಸ್ಥಾನದ ಸಮೀಪ ರಸ್ತೆಯಲ್ಲಿ ಅರಣ್ಯ ಇಲಾಖೆಯವರು ಸದರಿ ವಾಹನವನ್ನು ತಡೆದು ಜಪ್ತು ಮಾಡಿದ್ದಾರೆಂದು, ಅರ್ಜಿದಾರನು ದೇವೇಂದ್ರನ ಮೇಲೆ ಈ ಬಗ್ಗೆ ತಮ್ಮ ಗಮನಕ್ಕೆ ಬಾರದೇ ಬೀಟೆ ತುಂಡುಗಳನ್ನು ಸಾಗಿಸಿದ ಬಗ್ಗೆ ದೂರು ಕೊಟ್ಟಿದ್ದು, ಆ ಬಗ್ಗೆ ದೇವೇಂದ್ರನ ಮೇಲೆ ಕ್ರಿಮಿನಲ್ ಕೇಸು ಹೊಸನಗರ ನ್ಯಾಯಾಲಯದಲ್ಲಿ ನಡೆಯುತ್ತಿದೆಯೆಂದು, ಮತ್ತು ಪ್ರಾಸಿಕ್ಯೂಷನ್ ಮಹಜರನ್ನು ಸಾಬೀತುಮಾಡಲು ಹಗಲು 11 ಗಂಟೆಯಲ್ಲಿ ಮಹಜರ್‌ನಲ್ಲಿ ಖಾಸಗಿ ಸಾಕ್ಷಿಯ ಸಹಿ ಪಡೆದಿರುವುದಿಲ್ಲ. 9 ಬೀಟೆ ತುಂಡುಗಳನ್ನು ಸರ್ಕಾರದ ಜಾಗದಿಂದ ಕಡಿದ ಬಗ್ಗೆ ಸಾಬೀತುಪಡಿಸಿಲ್ಲ. ಒಂದು ವೇಳೆ ಕಾಡಿನಲ್ಲಿ ಈ ಮರಗಳನ್ನು ಕಡಿದಿದ್ದರೆ ಕೊಯ್ತು ಮಾಡಿದ ಬಗ್ಗೆ ಗುಂಡಿ, ಗರಗಸ, ಮರದ ಹಾಗೂ ಕೊಯ್ತು ಮಾಡಿದ ಬುಡ ಇವುಗಳನ್ನು ಮಹಜರ್‌ನಲ್ಲಿ ತೋರಿಸಿಲ್ಲವೆಂದು, ಕಾಡಿನಿಂದ ಕಳ್ಳತನ ಮಾಡಿಕೊಂಡು ಬಂದ ನಾಟಾಗಳಾಗಿದ್ದರೆ ರಹದಾರಿ ಕೇಳುವ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲವೆಂದು, ಸದರಿ ಮಾಲು ಖಾಸಗಿ ಜಾಗದಿಂದ ಕಡಿದು ಸಾಗಿಸುತ್ತಿದ್ದಾರೆಂದು ಗೊತ್ತಾಗಿ ಕಾರಣ ಡ್ರೈವರ್‌ನಿಂದ ರಹದಾರಿ ಕೇಳಿರುವುದು ಸಾಕ್ಷಿ ಹೇಳಿಕೆಯಲ್ಲಿ ಕಂಡುಬಂದಿದೆಯೆಂದು, ಈ ಬೀಟೆ ಮರವು ಸರ್ಕಾರಕ್ಕೆ ಸೇರಿದ ಅರಣ್ಯದಲ್ಲಿ ಇದ್ದ ಮರಗಳು ಮತ್ತು ಇವುಗಳನ್ನು ಕಳ್ಳತನ ಮಾಡಿ ಸಾಗಿಸುತ್ತಿದ್ದಾರೆ ಮತ್ತು ಬೀಟೆ ನಾಟಾ ಸರ್ಕಾರದ್ದೇ ಎಂದು ಪ್ರಾಸಿಕ್ಯೂಷನ್ ಸಾಬೀತುಪಡಿಸಿಲ್ಲವಾದ ಕಾರಣ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿಲ್ಲವೆಂದು ವಾಹನವನ್ನು ಈ ತೀರ್ಪಿನಲ್ಲಿ ಬಿಡುಗಡೆ ಮಾಡಿರುತ್ತಾರೆ. ವಾಹನ ಚಾಲಕನು ವಾಹನ ಮಾಲೀಕರ ಗಮನಕ್ಕೆ ಬಾರದೆ ಅರಣ್ಯ ಉತ್ಪನ್ನವನ್ನು ವಾಹನದಲ್ಲಿ ಸಾಗಿಸಿದಾಗ ವಾಹನ ಮಾಲೀಕರು ನಿರಪರಾಧಿ ಎಂದು, ಇವರಿಗೆ ಶಿಕ್ಷೆ ನೀಡಿದರೆ ನಿರಪರಾದಿಗೆ ಶಿಕ್ಷೆ ಮಾಡಿದಂತಾಗುತ್ತದೆಂದು 1999 ಕ್ರಿ ಮಿನಲ್ ಲಾ ಜನರಲ್ ಪುಟ 553ರಲ್ಲಿ ಬಾಂಬೆ ಹೈಕೋರ್ಟ್ ತೀರ್ಪು ನೀಡಿರುತ್ತದೆ. ಸದರಿ ತೀರ್ಪಿನ ಪ್ರತಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ವಾಹನ ಬಿಟ್ಟುಕೊಡಲು ಕೋರಿರುತ್ತಾರೆ.

ದಿ: 16–12–06ರಂದು ಸಹಾಯಕ ಸರ್ಕಾರಿ ಅಭಿಯೋಜಕರು ವಾದ ಮಂಡಿಸಿ, ಈ ವಾಹನವನ್ನು ಬೀಟೆ ಸೈಜನ್ನು ಅಕ್ರಮವಾಗಿ ಸಾಗಾಣಿಕೆ ಮಾಡಲು ಉಪಯೋಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಹೊಸನಗರ ಇವರ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯಿಂದ ಸಾಬೀತಾಗಿದೆ. ಈ ಪ್ರಕರಣ ದಾಖಲಾದ ನಂತರ ವಾಹನ ಮಾಲೀಕರು ಮತ್ತು ಇವರ ವಕೀಲರು ಸುಳ್ಳು ದಾಖಲೆಗಳನ್ನು ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಠಿಸಿರುತ್ತಾರೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರು ಸ್ವರಾಜ್ ಮಜದಾ ಕೆಎ–28–1375ರಲ್ಲಿ ಬೀಟೆ ತುಂಡು 9=0.867ಎಂ3ನ್ನು ದಿ:02–08–2004 ರಂದು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ಸ್ವರಾಜ್ ಮಜದಾ ವ್ಯಾನಿನಲ್ಲಿ ಅಕ್ರಮವಾಗಿ ಸರ್ಕಾರದ ಸಂಪತ್ತಾದ ಬೀಟೆ ತುಂಡನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನದ ಮಾಲೀಕರ ಗಮನಕ್ಕೆ ಬಾರದಂತೆಯೇ ಈ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ, ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ಹೌದು ಎಂದು, ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

**ಅಂಶ–1:**

ದಿ:02–08–2004ರಂದು ವಲಯ ಅರಣ್ಯಾಧಿಕಾರಿ, ಹೊಸನಗರ ಮತ್ತು ಇವರ ಸಿಬ್ಬಂದಿಯವರು ಹೊಸನಗರ ತಾಲ್ಲೂಕು ಕಸಬಾ ಹೋಬಳಿ ಜೇನಿ ಗ್ರಾಮದಲ್ಲಿ ಗಸ್ತು ಮಾಡುತ್ತಾ ಬರುತ್ತಿರುವಾಗ ಬೆಳಿಗ್ಗೆ ಸುಮಾರು 10.00 ಗಂಟೆ ಸಮಯದಲ್ಲಿ ಒಂದು ವಾಹನ ಬರುತ್ತಿರುವುದನ್ನು ತಡೆದು ನಿಲ್ಲಿಸಲು ಸೂಚಿಸಿದಾಗ ವಾಹನದಲ್ಲಿದ್ದ ಆಸಾಮಿಗಳು ಓಡಿಹೋಗಿ ಅದರಲ್ಲಿ ಇಬ್ಬರು ಆಸಾಮಿಗಳನ್ನು ಹಿಡಿದಿರುತ್ತಾರೆ. ಮತ್ತು ಸ್ವರಾಜ್ ಮಜದಾ ನಂ:ಕೆಎ–28–1375ಆಗಿದ್ದು ವಾಹನದೊಳಗೆ ಬೀಟೆ ನಾಟಾ 9=0.867ಎಂ3 ಇದ್ದು ಇದನ್ನು ಗರಗಸದಿಂದ ಆಗತಾನೇ ಕೊಯ್ತು ಮಾಡಿದ್ದಾಗಿದ್ದು, ಹಸಿಯಾಗಿರುತ್ತದೆ. ಮತ್ತು ಈ ನಾಟಾಗಳಿಗೆ ಯಾವುದೇ ಇಲಾಖಾ ಛಾಪಾವಾಗಲೀ, ಸಾಗಿಸಲು ರಹದಾರಿಯಾಗಲೀ ಇರಲಿಲ್ಲ. ಅಲ್ಲದೇ ಈ ನಾಟಾಗಳನ್ನು ಕಡಿದ ಮರದ ಬುಡದ ಅಳತೆಯನ್ನು ಮತ್ತು ವಾಹನ ಹಿಡಿದ ಸ್ಥಳದ ಚೆಕ್ಕುಬಂದಿಯನ್ನು ಮಹಜರ್‌ನಲ್ಲಿ ನಮೂದಿಸಿರುತ್ತಾರೆ. ಈ ಬಗ್ಗೆ ಮಹಜರ್, ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ ತಯಾರಿಸಿ ಸಾಕ್ಷಿಗಳ ಸಹಿಯೊಂದಿಗೆ ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಅಲ್ಲದೇ ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ, ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳಿಗೂ ಹೋಲಿಕೆಯಾಗಿರುತ್ತದೆ. ಆದರೆ ವಾಹನ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿಯಲ್ಲಿ ಈ ಬೀಟೆ ನಾಟಾವನ್ನು ಜೇನಿ ಗ್ರಾಮದ ಸರ್ವೆ ನಂ: 53ರ ಕುಮಾರ್ ಎಂಬುವವರ ಜಾಗದಿಂದ ಕಡಿದಿದ್ದು ಎಂದು ಹೇಳಿರುತ್ತಾರೆ. ಆದರೆ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ಬೀಟೆ ಮರವನ್ನು ಕಡಿಯಲು ಅರ್ಜಿದಾರರು ಇಲಾಖಾ ಅನುಮತಿ ಪಡೆದು ಅದನ್ನು ಸರ್ಕಾರಿ ಡಿಪೋಕ್ಕೆ ಸಾಗಾಣಿಕೆ ಮಾಡಿ ನಂತರ ಬಹಿರಂಗ ಹರಾಜಿನಲ್ಲಿ ವಿಲೇಯಾದ ಹಣದಲ್ಲಿ ಇಲಾಖೆಗೆ ಆದ ಖರ್ಚನ್ನು ಕಡಿತಗೊಳಿಸಿ ಉಳಿದ ಹಣವನ್ನು ಬೀಟೆ ಬೋನಸ್ ಮೂಲಕ ಮಾಲೀಕರು ಪಡೆಯಲು ಕಾನೂನಿನಲ್ಲಿ ಅವಕಾಶವಿದೆ. ಆದರೆ ಬೀಟೆ ಮರ ಕಡಿದು ಸ್ವಂತ ಬಳಕೆಗೆ ಉಪಯೋಗಿಸಲು ಕಾನೂನಿನಲ್ಲಿ ಅವಕಾಶವಿರುವುದಿಲ್ಲ. ಅಲ್ಲದೇ ಈ ಪ್ರಕರಣದಲ್ಲಿ ಅರ್ಜಿದಾರರು ಕರ್ನಾಟಕ ಅರಣ್ಯ ಕಾನೂನು ಕಾಯ್ದೆಯನ್ನು ಉಲ್ಲಂಘಿಸಿರುವುದು ಸಾಬೀತಾಗಿದೆ. ಆದ್ದರಿಂದ ಒಂದನೇ ಅಂಶಕ್ಕೆ ಹೌದು ಎಂಬುದಾಗಿರುತ್ತದೆ.

**ಅಂಶ–2:**

ಈ ಪ್ರಕರಣದಲ್ಲಿ ಅಮಾನತ್ತು ಪಡಿಸಿದ ಸ್ವರಾಜ್ ಮಜ್ದಾ ವ್ಯಾನ್ ಕೆಎ–28–1375ರ ಮಾಲೀಕರಾದ ಶ್ರೀ ಏಕನಾಥ ಬಿನ್ ದಾಮೋದರ್ ನಾಯಕ್, ವಿಘ್ನೇಶ್ವರ ಇಂಜಿನಿಯರಿಂಗ್ ನೆಹರು ರಸ್ತೆ, ಹೊಸನಗರ ಇವರು ವಕೀಲರ ಮುಖಾಂತರ ದಿ:04–08–2004 ರಂದು ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡುವಂತೆ ಈ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿರುತ್ತಾರೆ. ಇವರಿಗೆ ಕಾರಣ ಕೇಳಿ ಪತ್ರವನ್ನು ದಿ:06–08–2004ರಂದು ಜಾರಿ ಮಾಡಿರುತ್ತದೆ. ವಾಹನ ಮಾಲೀಕರ ಅರ್ಜಿಯನ್ನು ದಿ: 15–12–2004ರಂದು ತಿರಸ್ಕರಿಸಿ ಆದೇಶವಾಗಿದೆ. ಅಲ್ಲದೇ ಡಿಫೆನ್ಸ್ ಸಾಕ್ಷಿ ಹೇಳಿಕೆ ಪಡೆಯಲು ಮತ್ತು ವಾದ ಮಂಡಿಸಲು ಡಿಫೆನ್ಸ್ ಕಡೆಯವರಿಗೆ ಬಹಳಷ್ಟು ಕಾಲಾವಕಾಶ ನೀಡಿದೆ ಎಂದು ನನ್ನ ಉತ್ತರವಾಗಿದೆ.

**ಅಂಶ–3:**

ದಿ:02–08–2004ರಂದು ವಲಯ ಅರಣ್ಯಾಧಿಕಾರಿ, ಹೊಸನಗರ ಮತ್ತು ಸಿಬ್ಬಂದಿಯವರು ಹೊಸನಗರ ತಾಲ್ಲೂಕು ಕಸಬಾ ಹೋಬಳಿ, ಜೇನಿ ಗ್ರಾಮದ ಹತ್ತಿರ ಗಸ್ತು ತಿರುಗುತ್ತಿರುವಾಗ ಒಂದು ವಾಹನ ಬಂದಿತು. ಆ ವಾಹನ ಸ್ವರಾಜ್ ಮಜದಾ ಕೆಎ–28–1375ಆಗಿದ್ದು,ಈ ವಾಹನದಲ್ಲಿ ಬೀಟೆ ನಾಟಾ 9=0.867ಎಂ3ನ್ನುರಹದಾರಿ ಇಲ್ಲದೇ ಸಾಗಿಸುತ್ತಿದ್ದ ಬಗ್ಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 104(ಎ) 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144, 165ರ ಪ್ರಕಾರ ಪ್ರಥಮ ವರ್ತಮಾನ ವರದಿ, ಮತ್ತು ಮಹಜರ್ ವರದಿ ತಯಾರಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 23/04–05ನ್ನು ದಾಖಲಿಸಿ ಈ ನ್ಯಾಯಾಲಯಕ್ಕೆ ವಾಹನ ಮತ್ತು ದಾಖಲೆಗಳನ್ನು ಹಾಜರ್ಪಡಿಸಿರುತ್ತಾರೆ. ಸಿಕ್ಕಿಬಿದ್ದ ಆಸಾಮಿಗಳು ಈ ವಾಹನದಲ್ಲಿ ಸಾಗಿಸುತ್ತಿದ್ದ ಬೀಟೆ ನಾಟಾಕ್ಕೆ ರಹದಾರಿ ಇಲ್ಲವೆಂದು ಹೇಳಿರುತ್ತಾರೆ. ಸದರಿ ವಾಹನದಲ್ಲಿದ್ದ ಬೀಟೆ ನಾಟಾಗಳನ್ನು ಸರ್ಕಾರದ ಕಾಡಿನಿಂದ ಕಡಿದ ಬಗ್ಗೆ ಮಹಜರಿನಲ್ಲಿ ಮರದ ಬುಡದ ಅಳತೆ ಮತ್ತು ಚೆಕ್ಕುಬಂದಿಯನ್ನು ಸಹ ನಮೂದಿಸಿರುತ್ತಾರೆ. ಆದರೆ ಡಿಫೆನ್ಸ್ ಕಡೆಯವರು ಲಿಖಿತ ವಾದದಲ್ಲಿ ತಿಳಿಸಿದಂತೆ ಸದರಿ ಬೀಟೆ ಮರಗಳನ್ನು ಜೇನಿ ಗ್ರಾಮದ ಸರ್ವೆ ನಂ: 53ರ ಕುಮಾರ್ ಎಂಬುವವರ ಜಾಗದಿಂದ ಕಡಿದಿದ್ದೆಂದು ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಅಲ್ಲದೇ ವಾಹನ ಮಾಲೀಕರು ಹಂಗಾಮಿ ಚಾಲಕನನ್ನು ಈ ವಾಹನದಲ್ಲಿ ನೇಮಿಸಿ ಕಳುಹಿಸಿದ್ದು, ವಾಹನ ಚಾಲಕನು ಮಾಡಿದ ಈ ಕೃತ್ಯವು ವಾಹನ ಮಾಲೀಕರ ಗಮನಕ್ಕೆ ಬರಲಿಲ್ಲವೆಂದು ತಿಳಿಸಿರುತ್ತಾರೆ. ಆದರೆ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಕಾನೂನುಗಳ ಪ್ರಕಾರ ವಾಹನ ಮಾಲಿಕರಾಗಲೀ ಅವರ ಪರ ಚಾಲಕರಾಗಲೀ, ಪ್ರತಿನಿಧಿಗಳಾಗಲೀ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿದ್ದರೆ ಅದು ವಾಹನ ಮಾಲೀಕರು ಈ ವಾಹನದಲ್ಲಿ ಕಳ್ಳಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳುವುದು ವಾಹನ ಮಾಲೀಕರ ಕರ್ತವ್ಯವಾಗಿದೆ. ಇದರಿಂದ ವಾಹನ ಮಾಲೀಕರು ಪರೋಕ್ಷವಾಗಿ ಈ ವಾಹನವನ್ನು ಬೀಟೆ ನಾಟಾ ಕಳ್ಳಸಾಗಾಣಿಕೆಗೆ ಬಳಸಿದ್ದಾರೆ ಎನ್ನುವುದು ಸಾಬೀತಾಗಿದೆ. ಅಲ್ಲದೇ ಈ ವಾಹನದಲ್ಲಿ ಬೀಟೆ ನಾಟಾ ಕಳ್ಳಸಾಗಾಣಿಕೆ ಮಾಡುವ ಒಂದು ವಾರದ ಮುನ್ನ ವಾಹನ ಮಾಲೀಕರು ಅನಾರೋಗ್ಯದಿಂದ ಬಳಲುತ್ತಿದ್ದ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಈ ವಾಹನದ ವಿಚಾರಣಾ ಕಾಲದಲ್ಲಿ ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದಿಲ್ಲ. ಆದ್ದರಿಂದ ಮೂರನೇ ಅಂಶದ ಮೊದಲನೇ ಭಾಗ ಹೌದು ಎಂಬುದಾಗಿ ಮತ್ತು ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂಬುದಾಗಿರುತ್ತದೆ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ವಲಯ ಅರಣ್ಯಾಧಿಕಾರಿ ಸಾಗರ ಇವರು ಜಪ್ತು ಮಾಡಿದ ವಾಹನ ಸ್ವರಾಜ್ ಮಜದಾ ಕೆಎ-28-1375ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 9=0.867ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶ ತೆರೆದ ನ್ಯಾಯಾಲಯದಲ್ಲಿ ನನ್ನ ಉತ್ತಲೇಖನದಲ್ಲಿ ಬರೆಯಿಸಿ ಗಣಕ ಯಂತ್ರದಲ್ಲಿ ಮುದ್ರಿಸಿ ಸರಿಪಡಿಸಿ ದಿನಾಂಕ:17-02-2007 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ಹೊರಡಿಸಿದೆ. ಈ ಆದೇಶ ಹೊರಡಿಸಿದ 30 ದಿನಗಳ ಒಳಗಾಗಿ ಯಾರು ಮೇಲ್ಮನವಿ ಹೋಗದೆ ಇದ್ದಲ್ಲಿ, ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

ಪಿ.ಆರ್. 239

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3: ಅಮೊ: ವಾಹನ: 09/01-02, ದಿನಾಂಕ:24ನೇ ಫೆಬ್ರವರಿ 2007.**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಸಾಗರ ವಲಯ, ಸಾಗರ.
(ಸಹಾಯಕ ಸರ್ಕಾರಿ ಅಭಿಯೋಜಕರು)

**ವಾಹನ ಮಾಲೀಕರು** : ಶ್ರೀ ಸುನೀಲ್ ಜಾರ್ಜ್ ಬಿನ್ ಕೆ.ಎಂ. ಜಾರ್ಜ್,
ಮರಿಯಾ ಪ್ಲಾಂಟೇಶನ್, ಕೊಪ್ಪ, ನೀಚಡಿ ಅಂಚೆ, ಸಾಗರ ತಾಲ್ಲೂಕು.
(ಶ್ರೀ ಟಿ.ಬಿ. ಮಂಜುನಾಥ ಶೆಟ್ಟಿ, ವಕೀಲರು)

**ಪ್ರಸ್ತಾವನೆ:**

ದಿ: 28-06-2001 ಸಾಗರ ವಲಯದ ಆವಿನಹಳ್ಳಿ ವನಪಾಲಕರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಸಾಗರ ತಾಲ್ಲೂಕು ಆವಿನಹಳ್ಳಿ ಹೋಬಳಿ ಬೇದೂರು ಬಸ್ ನಿಲ್ದಾಣದ ಪಕ್ಕ ಪಂಚರ ಸಮಕ್ಷಮ ಕಾಯುತ್ತಿರುವಾಗ ಬೆಳಿಗ್ಗೆ ಜಾವ ಸುಮಾರು 4 ಗಂಟೆಗೆ ಸಿಡೆಬಯಲು ಕಡೆಯಿಂದ ಬೇದೂರು ಮಾರ್ಗ ಸಾಗರ ಕಡೆಗೆ ಒಂದು ವ್ಯಾನ್ ವೇಗವಾಗಿ ಬರುತ್ತಿರುವುದನ್ನು ಬ್ಯಾಟರಿ ಸಹಾಯದಿಂದ ನಿಲ್ಲಿಸಲು ಸೂಚನೆ ಕೊಟ್ಟಾಗ ವ್ಯಾನ್ ವೇಗವಾಗಿ ಚಲಿಸಿದ್ದರಿಂದ ಬೆನ್ನಟ್ಟಿದರು ನಿಲ್ಲಿಸದೇ ಹೋಗಿದ್ದರಿಂದ ವ್ಯಾನಿನಲ್ಲಿ ಏನೋ ಕಳ್ಳ ಸಾಗಾಣಿಕೆಯಾಗುತ್ತಿದೆಯೆಂದು ತಿಳಿದು ಗಾಳಿಯಲ್ಲಿ ಎರಡು ಸುತ್ತು ಗುಂಡು ಹಾರಿಸಿದಾಗ ಸುಮಾರು 6, 7 ಕಿ.ಮೀ. ದೂರ ಚಲಿಸಿದರೊಳಗೆ ಸಾಗರ ಟೌನಿನ ಕಂಬಳಿಕೊಪ್ಪದಲ್ಲಿರುವ ಸಾಮಿಲ್ ಹಿಂಭಾಗದಲ್ಲಿ ವ್ಯಾನ್ ನಿಲ್ಲಿಸಿ ಅದರಲ್ಲಿದ್ದ ಅಸಾಮಿಗಳು ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾರೆ. ನಂತರ ವಾಹನ ಪರಿಶೀಲಿಸಲಾಗಿ ವ್ಯಾನ್ ನಂ: 407 ಕೆಎ-20-1617 ಆಗಿದ್ದು, ವ್ಯಾನಿನ ಹಿಂಭಾಗದಲ್ಲಿ ಕೆಲವು ಬೀಟೆ ಜಾತಿಯ ತುಂಡುಗಳಿದ್ದು ಅವುಗಳ ಮೇಲೆ ಯಾವುದೇ ಇಲಾಖಾ ಛಾಪಾವಾಗಲೀ, ಸಾಗಿಸಲು ರಹದಾರಿಯಾಗಲಿ ಇಲ್ಲದೆ ಇದ್ದುದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಬೀಟೆ ತುಂಡು 29=0.863ಎಂ3ನ್ನು ಜಪ್ತು ಮಾಡಿ ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ), 104(ಎ), 62ರ ಪ್ರಕಾರ ಸಾಗರ ವಲಯದ ಅರಣ್ಯ ಮೊಕದ್ದಮೆ 39/2001-02ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ವಾಹನವನ್ನು ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಬಗ್ಗೆ ಬಾಧ್ಯತೆದಾರರ ಪರ ಶ್ರೀ ಮರಿದಾಸ್, ವಕೀಲರು ದಿ: 30-06-2001ರಂದು ಈ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿ, ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಬಾಧ್ಯತೆದಾರರ ಅರ್ಜಿಯನ್ನು ದಿ: 16-12-2003ರಂದು ಈ ನ್ಯಾಯಾಲಯದಿಂದ ತಿರಸ್ಕರಿಸಿ ಆದೇಶವಾಗಿದೆ.

ನಂತರ ಈ ಪ್ರಕರಣದಲ್ಲಿ ಪ್ರಾಸಿಕ್ಯೂಷನ್ ಸಾಕ್ಷಿ ಶ್ರೀ ಡಿ.ಬಿ. ಗಾಂವಕರ್, ವನಪಾಲಕರನ್ನು ಕರೆಸಿ ಮುಖ್ಯ ವಿಚಾರಣೆ ಸಹಾಯಕ ಸರ್ಕಾರಿ ಅಭಿಯೋಜಕರವರಿಂದ ದಿ: 28-06-2001ರಂದು ನಮಗೆ ಬಂದ ವರ್ತಮಾನದ ಮೇರೆಗೆ ನನ್ನ ನೇತೃತ್ವದಲ್ಲಿ ರಾತ್ರಿ ಗಸ್ತಿನ ಸಿಬ್ಬಂದಿ ಜೊತೆ ಇಲಾಖಾ ವಾಹನದಲ್ಲಿ ರಾತ್ರಿ ಸುಮಾರು 4 ಗಂಟೆ ಸಮಯದಲ್ಲಿ ಕಾಯುತ್ತಿರುವಾಗ ಬೇದೂರು ಕಡೆಯಿಂದ ಒಂದು 407 ವಾಹನ ಬಂದಿತು. ಅದನ್ನು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೆ ಹೋಯಿತು. 6,7 ಕಿ.ಮೀ. ಬೆನ್ನಟ್ಟಿ, ಗಾಳಿಯಲ್ಲಿ 2 ಸುತ್ತು ಗುಂಡು ಹಾರಿಸಿದೆವು. ಕಂಬಳಿಕೊಪ್ಪದ ಸಾಮಿಲ್ ಹತ್ತಿರ ವಾಹನ ನಿಲ್ಲಿಸಿ ಅದರಲ್ಲಿದ್ದವರು ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾರೆ. ವಾಹನವನ್ನು ಪರಿಶೀಲಿಸಲಾಗಿ ಅದರಲ್ಲಿ ಒಟ್ಟು 29 ಒರಟು ಕೆತ್ತನೆ ಮಾಡಿದ ಬೀಟೆ ಸೈಜುಗಳಿದ್ದವು. ಈ ಬೀಟೆ ಸೈಜ್‌ಗಳನ್ನು ಸಾಗಿಸಲು ರಹದಾರಿ ಇರಲಿಲ್ಲ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಅವುಗಳನ್ನು ಅಳತೆ ಮಾಡಿ ಕ್ರಮ ಸಂಖ್ಯೆ ನೀಡಿ ವಾಹನ ನಂ: ಕೆಎ-20-1617ಎಂದು ಬರೆದಿತ್ತು. ಪಂಚರ ಸಮಕ್ಷಮ ವಾಹನವನ್ನು ಸದರಿ ಬೀಟೆ ಸೈಜ್ ಸಮೇತ ನಿಪಿ 1 ಪಂಚನಾಮೆ ಅಡಿಯಲ್ಲಿ ಅಮಾನತ್ತು ಪಡಿಸಿದೆವು. ನಿಪಿ-1ಕ್ಕೆ 1ಎ ನನ್ನ ಸಹಿ ಇದೆ. ಮಹಜರನ್ನು ನನ್ನ ಉತ್ತಲೇಖನದಲ್ಲಿ ನಮ್ಮ ಸಿಬ್ಬಂದಿ ಟಿ.ಜಿ. ರಂಗಪ್ಪ

ಬರೆದಿದ್ದಾರೆ. ಬೀಟೆ ಸೈಜಿನ ಮೇಲೆ ಛಾಪಾ ಹಾಕಿದೆವು. ಮಹಜರ್‌ನಲ್ಲಿ ವಾಹನ ಮತ್ತು ಬೀಟೆ ಸೈಜ್‌ಗಳ ವಿವರ ನಮೂದಿಸಿದೆ. ಮಹಜರ್ ಸಮಯದಲ್ಲಿ ಖಾಸಗಿ ಪಂಚರು ದೊರೆಯದೇ ಇದ್ದುದ್ದರಿಂದ ಇಲಾಖಾ ಸಿಬ್ಬಂದಿಯವರೇ ಪಂಚರಾಗಿ ಸಹಕರಿಸಿದರು. ನಾನು ಪ್ರಭಾರ ವಲಯ ಅರಣ್ಯಾಧಿಕಾರಿಯಾಗಿದ್ದೆ. ಎಂಒ–1 ವಾಹನ ಹಾಗೂ ಬೀಟೆ ಸೈಜ್‌ನ್ನು ಕಛೇರಿಗೆ ತಂದು ಗುನ್ನೆ ನಂ: 39/01–02ನ್ನು ದಾಖಲಿಸಿದೆ. ಪ್ರಥಮ ವರ್ತಮಾನ ವರದಿ, ನಿಪಿ–2 ನ್ಯಾಯಾಲಯಕ್ಕೆ ಒಪ್ಪಿಸಿದೆ. ನಂತರ ವಾಹನವನ್ನು ಮುಂದಿನ ಕ್ರಮಕ್ಕಾಗಿ ಪ್ರಾಧಿಕಾರಕ್ಕೆ ಕಳುಹಿಸಿದೆ.

ಸಾಕ್ಷಿಯನ್ನು ದಿ: 25–02–2006ರಂದು ಪುನಃ ಕರೆಸಿ ಸತ್ಯ ಪ್ರತಿಜ್ಞೆ ಭೋದಿಸಲಾಯಿತು. ಪಾಟೀ ಸವಾಲು ಟಿ.ಬಿ.ಎಂ. ವಕೀಲರಿಂದ ಸದರಿ ಜಪ್ತಾದ ಮಾಲಿನ ಬಗ್ಗೆ ಸಾಮಿಲ್ ಮಾಲೀಕರ ಹತ್ತಿರ ವಿಚಾರ ಮಾಡಿರುವುದಿಲ್ಲ. ಕಂಬಳಿ ಕೊಪ್ಪ ಜಾಗದಲ್ಲಿ ಸಾಕಷ್ಟು ಖಾಸಗಿ ಜಮೀನಿನಲ್ಲಿ ನೂರಾರು ಬೀಟೆ ಮರಗಳಿರಬಹುದು. ಆ ದಿನ ಸಾಮಿಲ್‌ಗೆ ಲೋಡ್ ಮಾಡಲು ಬಂದಿದ್ದ ಖಾಲಿ ವ್ಯಾನನ್ನು ಜಪ್ತಿ ಮಾಡಿದ್ದೇವೆ ಎಂದರೆ ಸರಿಯಲ್ಲ. ಆ ದಿನ ವಾಹನವನ್ನು ಸಾಗರ ಪಟ್ಟಣದ ಸಾಮಿಲ್ ಹಿಂದೆ ನಿಂತಿದ್ದ ವ್ಯಾನನ್ನು ಬೇದೂರು ಬಸ್ ನಿಲ್ದಾಣಕ್ಕೆ ತೆಗೆದುಕೊಂಡು ಹೋದೆವು, ಸದರಿ ವಾಹನಕ್ಕೆ ಬೀಟೆ ತುಂಡುಗಳನ್ನು ತುಂಬಿಸಿಕೊಂಡೆವು ಅಂದರೆ ಸರಿಯಲ್ಲ. ಸದರಿ ವಾಹನದ ಸ್ವಿಚ್ ಕೀಯನ್ನು ಅವರು ಬಿಟ್ಟುಹೋಗಿದ್ದರು, ಈ ವಾಹನವನ್ನು ನಿಂತ ಸ್ಥಳದಿಂದ ಬೇದೂರಿಗೆ ತೆಗೆದುಕೊಂಡು ಹೋದ ಬಗ್ಗೆ ಮಹಜರ್‌ನಲ್ಲಿ ಬರೆಯಲಿಲ್ಲ ನಿಜ. ಮಹಜರಿಗೆ ಖಾಸಗಿ ಪಂಚರು ಸಹಿ ಮಾಡಲು ಒಪ್ಪಲಿಲ್ಲ ಎಂದು ಮಹಜರ್‌ನಲ್ಲಿ ಬರೆಯಲಿಲ್ಲ. ಬೇದೂರಿನ ಭಟ್ಟರ ಮನೆ ಹಿಂದೆ ಇದ್ದ ತುಂಡುಗಳನ್ನು ತುಂಬಲು ವಾಹನವನ್ನು ಬೇದೂರಿಗೆ ತೆಗೆದುಕೊಂಡು ಹೋದೆವು ಎಂದರೆ ನಿಜವಲ್ಲ. ಸದರಿ ವಾಹನವು ಜಾರ್ಜ್ ಅವರಿಗೆ ಸೇರಿದ್ದೆಂದು ತಿಳಿದುಬಂತು. ಸದರಿ ವಾಹನವನ್ನು ದಿನಗೂಲಿ ವಾಹನ ಚಾಲಕ ರಾಜು ಎಂಬುವವರು ನಡೆಸುತ್ತಿದ್ದುದ್ದು ನನಗೆ ಗೊತ್ತಿಲ್ಲ.

ಡಿಫೆನ್ಸ್ ಸಾಕ್ಷಿಯನ್ನು ದಿ: 15–04–2006ರಂದು ಕರೆಸಿ ಮುಖ್ಯ ವಿಚಾರಣೆ ಟಿ.ಬಿ.ಎಂ. ವಕೀಲರಿಂದ ಲಾರಿ ನಂ: ಕೆಎ–20–1617 ಸುನೀಲ್ ಜಾರ್ಜ್‌ಗೆ ಸೇರಿದ್ದಾಗಿದೆ. ಅವರು ನನಗೆ ಪವರ್ ಆಫ್ ಅಟಾರ್ನಿ ನಿಡಿ–1 ಕೊಟ್ಟಿರುತ್ತಾರೆ. ವಾಹನವು ಸುನೀಲ್ ಜಾರ್ಜ್‌ಗೆ ಸೇರಿದ ಬಗ್ಗೆ ನಿಡಿ–2 ನ್ಯಾಯಾಲಯಕ್ಕೆ ಒಪ್ಪಿಸಿದ್ದೇನೆ. ಲಾರಿಗೆ ರಾಜು ಎಂಬ ಹಂಗಾಮಿ ಚಾಲಕನನ್ನು ನೇಮಿಸಿದೆ. ಆ ದಿನ ಕಂಬ್ಳಿಕೊಪ್ಪ ಬಡಾವಣೆಯ ಸಾಮಿಲ್‌ನಿಂದ ಚಿತ್ರದುರ್ಗಕ್ಕೆ ಕಟ್ಟಿಗೆ ಸಾಗಿಸಲು ಬಾಡಿಗೆ ಕರಾರಾಗಿತ್ತು. ಆ ಸಮಯದಲ್ಲಿ ಅರಣ್ಯ ಇಲಾಖೆಯವರು ಬಂದ ಜಪ್ತು ಮಾಡಿರುತ್ತಾರೆ. ವಾಹನ ಚಾಲಕನು ನನ್ನಲ್ಲಿಗೆ ಬಂದು ನಡೆದ ವಿಷಯವನ್ನು ತಿಳಿಸಿದೆ. ನಮ್ಮ ವಾಹನವು ಇದುವರೆಗೆ ಯಾವ ತರಹದ ಪ್ರಕರಣದಲ್ಲೂ ಸಹಾ ಭಾಗಿಯಾಗಿರುವುದಿಲ್ಲ. ಸುನೀಲ್ ಜಾರ್ಜ್ ರವರಿಗೆ ಜೀವನ ನಡೆಸಲು ಈ ವಾಹನದ ಹೊರತು ಬೇರೆ ಯಾವುದೇ ಆದಾಯ ಇರುವುದಿಲ್ಲ. ಆದ್ದರಿಂದ ಲಾರಿಯನ್ನು ಬಿಟ್ಟುಕೊಡಲು ಕೋರಿರುತ್ತಾರೆ. ಸಾಕ್ಷಿಯನ್ನು ದಿ: 18–11–2006ರಂದು ಪುನಃ ಕರೆಸಿ ಪಾಟೀಸವಾಲು ಸಹಾಯಕ ಸರ್ಕಾರಿ ಅಭಿಯೋಜಕರಿಂದ ಲಾರಿಯಿಂದ ಬಂದ ಬಾಡಿಗೆಯನ್ನು ಸುನಿಲ್ ಜಾರ್ಜ್‌ಗೆ ಕೊಡುತ್ತಿದ್ದೆ. ಚಾಲಕನಿಗೆ ಸಂಬಳ ನಾನು ಕೊಡುತ್ತಿದ್ದೆ. ಹಲಸಿನ ಸೈಜನ್ನು ಚಿತ್ರದುರ್ಗಕ್ಕೆ ಸಾಗಿಸಲು ಬಾಡಿಗೆಗೆ ಹೋಗಲು 500/– ಮುಂಗಡ ಪಡೆದಿದ್ದೆ. ರೂ. 2500/–ಕ್ಕೆ ಒಪ್ಪಂದವಾಗಿತ್ತು. ಏಕೆ ಬೀಟೆ ನಾಟಾ ತುಂಬಿ ಕೇಸು ದಾಖಲಿಸಿದ್ದೀರೆಂದು ಅರಣ್ಯ ಇಲಾಖೆಯವರನ್ನು ಕೇಳಿರುವುದಿಲ್ಲ. ನಾನು ಆ ದಿನ ಬೀಟೆ ತುಂಡು ಸಾಗಿಸಲು ಕಳಿಸಿದ್ದೆ ಎನ್ನುವುದು ಮತ್ತು ಬೀಟೆ ನಾಟಾ ವಾಹನ ಜಪ್ತುಮಾಡುವಾಗ ತಪ್ಪಿಸಿಕೊಂಡು ಓಡಿಹೋದೆ ಎನ್ನುವುದು ಸರಿಯಲ್ಲ. ನಾನು ನನ್ನ ಲಾರಿ ಬಿಡಿಸಕೊಳ್ಳಲು ಸುಳ್ಳು ಮತ್ತು ಕಥೆ ಕಟ್ಟಿ ಹೇಳುತ್ತಿದ್ದೇನೆ ಎಂದರೆ ನಿಜವಲ್ಲ.

ಡಿಫೆನ್ಸ್ ಕಡೆ ದಿ: 20–01–2007ರಂದು ಟಿ.ಬಿ.ಎಂ. ವಕೀಲರು ವಾದ ಮಂಡಿಸಿದರು. ದಿ: 28–06–2001ರಂದು ಬೆಳಿಗ್ಗೆ 5 ಗಂಟೆಗೆ ಕಂಬ್ಳಿಕೊಪ್ಪ ಸಾಮಿಲ್ ಹತ್ತಿರ ನಿಲ್ಲಿಸಿದ ಖಾಲಿ ವಾಹನವನ್ನು ಅರಣ್ಯ ಇಲಾಖೆಯವರು ಬೇದೂರಿಗೆ ತೆಗೆದುಕೊಂಡು ಹೋಗಿ ಒಂದು ಮನೆಯ ಹಿಂಭಾಗದ ಸ್ವಂತ ಜಾಗದಿಂದ ಕಡಿದ ಬೀಟೆ ಮರ ತುಂಬಿಕೊಂಡು ಸುಳ್ಳುಕೇಸು ದಾಖಲಿಸಿರುತ್ತಾರೆ. ಕಂಬ್ಳಿಕೊಪ್ಪದಲ್ಲಿ ಸುಮಾರು 300 ಮನೆಗಳಿದ್ದು ಬೀಟೆ ನಾಟಾ ಹಾಕಿದ ಲಾರಿಯನ್ನು ಬೇದೂರಿಗೆ ಸುಮಾರು 7–8 ಕಿ.ಮೀ. ದೂರ ಏಕೆ ತೆಗೆದುಕೊಂಡು ಹೋದರು, ಅಲ್ಲದೇ ಕಂಬ್ಳಿಕೊಪ್ಪ ಮತ್ತು ಬೇದೂರಿನಲ್ಲಿಯಾಗಲೀ ಮಹಜರ್‌ಗೆ ಖಾಸಗಿ ಸಹಿ ಪಡೆದಿರುವುದಿಲ್ಲ. ಇದರಿಂದ ಖಾಲಿ ವಾಹನವನ್ನು ಕಂಬ್ಳಿಕೊಪ್ಪದಿಂದ ತೆಗೆದುಕೊಂಡು ಹೋಗಿ ಬೀಟೆ ನಾಟಾವನ್ನು ಬೇದೂರಿನಲ್ಲಿ ತುಂಬಿ ಸುಳ್ಳು ಕೇಸು ದಾಖಲಿಸಿರುತ್ತಾರೆ. ಬಾಧ್ಯತೆದಾರರು ಈ ವಾಹನವನ್ನು ಬೀಟೆ ನಾಟಾ ಸಾಗಿಸಲು ಪ್ರತ್ಯಕ್ಷವಾಗಲೀ ಪರೋಕ್ಷವಾಗಲೀ ಭಾಗಿಯಾಗಿರುವುದಿಲ್ಲ. ಅಲ್ಲದೇ ಈ ವಾಹವದಲ್ಲಿ ಕಂಬ್ಳಿಕೊಪ್ಪದ ಸಾಮಿಲ್‌ನಿಂದ ಚಿತ್ರದುರ್ಗಕ್ಕೆ ಕೆಲವು ನಾಟಾಗಳನ್ನು ಸಾಗಿಸಲು ಬಾಡಿಗೆಗೆ ಹೋಗಲು ಆ ದಿನ ಬೆಳಿಗ್ಗೆ 5 ಗಂಟೆಗೆ ಸಾಮಿಲ್ಲಿನ ಹತ್ತಿರ ನಿಲ್ಲಿಸಲಾಗಿತ್ತು. ಮತ್ತು ನಾಟಾಗಳನ್ನು ಲಾರಿಗೆ ಹೇರಲು ಕೂಲಿಗಾರರು ಇನ್ನೂ ಬಂದಿರಲಿಲ್ಲ ಮತ್ತು ಕೂಲಿಗಾರರನ್ನು ಹುಡುಕಲು ಚಾಲಕನು ಹೋಗಿದ್ದನು. ಮತ್ತು ಸಾಮಿಲ್‌ನವರು ಸಹ ಬಂದಿರಲಿಲ್ಲ. ಈ ಪ್ರಕರಣದಲ್ಲಿ ಜಪ್ತಾದ ಬೀಟೆ ನಾಟಾ ಸರ್ಕಾರಿ ಜಾಗದ್ದು ಎನ್ನುವ ಬಗ್ಗೆ ಮರದ ಬುಡದ ಮಹಜರ್ ಮಾಡಿರುವುದಿಲ್ಲ. ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಪ್ರಾಸಿಕ್ಯೂಷನ್ ಕಡೆಯವರು ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಆದ್ದರಿಂದ ವಾಹನವನ್ನು ಬಿಟ್ಟುಕೊಡಲು ಕೋರಿರುತ್ತಾರೆ.

ದಿ: 20–01–2007ರಂದು ಸಹಾಯಕ ಸರ್ಕಾರಿ ಅಭಿಯೋಜಕರು ವಾದ ಮಂಡಿಸಿ ವಲಯ ಅರಣ್ಯಾಧಿಕಾರಿ, ಸಾಗರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಬೇದೂರಿನಲ್ಲಿ ರಾತ್ರಿ ಕಾಯುತ್ತಿರುವಾಗ ಸುಮಾರು ಬೆಳಿಗ್ಗೆ 4 ಗಂಟೆ ಸಮಯದಲ್ಲಿ ಒಂದು ಲಾರಿ ಸಾಗರ ಕಡೆ ಬರುತ್ತಿರುವಾಗ ನಿಲ್ಲಿಸಲು ಸೂಚಿಸದರೂ ನಿಲ್ಲಿಸದೆ ವೇಗವಾಗಿ ಮುಂದೆ ಚಲಿಸಿದಾಗ ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಗಾಳಿಯಲ್ಲಿ 2 ಸುತ್ತು ಗುಂಡು ಹಾರಿಸಿ ನಂತರ ಕಂಬ್ಳಿಕೊಪ್ಪದಲ್ಲಿ ವಾಹನವನ್ನು ಇಲಾಖೆಯವರು ಹಿಡಿದಿರುತ್ತಾರೆ. ವಾಹನದಲ್ಲಿದ್ದ ಅಸಾಮಿಗಳು ಪರಾರಿಯಾಗಿರುತ್ತಾರೆ. ವಾಹನದಲ್ಲಿ ಬೀಟೆ ತುಂಡುಗಳಿದ್ದು, ಇವುಗಳನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಈ ಬಗ್ಗೆ ಸಾಕ್ಷಿಗಳ ಸಹಿಯೊಂದಿಗೆ ಮಹಜರ್ ಕ್ರಮ ಜರುಗಿಸಿ ಪ್ರಥಮ ವರ್ತಮಾನ ವರದಿ, ಜಪ್ತುವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಜಪ್ತಾದ ನಾಟಾಕ್ಕೆ ಯಾರೂ ವಾರಸುದಾರರು ಈ ನ್ಯಾಯಾಲಯಕ್ಕೆ ಬಿಡಿಸಿಕೊಳ್ಳಲು ಬಾರದೇ ಇರುವುದರಿಂದ ಈ ಬೀಟೆ ನಾಟಾದ ಮರದ ಬುಡವನ್ನು

ಪರಿಶೀಲನೆ ಮಾಡಿರುವುದಿಲ್ಲ ಅಲ್ಲದೇ ಅರಣ್ಯ ಇಲಾಖೆಗೆ ಸೇರಿದ ಸಾವಿರಾರು ಎಕರೆ ಜಾಗ ಇರುವುದರಿಂದ ಈ ಮರವನ್ನು ಕಡಿದ ಮರದ ಬುಡವನ್ನು ಪರಿಶೀಲಿಸುವುದು ಕಷ್ಟಸಾಧ್ಯವಾಗಿರುತ್ತದೆ. ಈ ವಾಹನವನ್ನು ಜಪ್ತುಮಾಡುವ ಸಮಯದಲ್ಲಿ ಇದ್ದ ಅಸಾಮಿಗಳು ಓಡಿ ಹೋಗಿರುವುದರಿಂದ ಈ ಬೀಟೆ ನಾಟಾವನ್ನು ಸರ್ಕಾರದ ಜಾಗದಿಂದ ಕಡಿದಿರುವರೆಂದು ಊಹಿಸಬಹುದಾಗಿದೆ. ಸರ್ಕಾರಿ ಜಾಗದಲ್ಲಾಗಲೀ, ಖಾಸಗಿ ಜಾಗದಲ್ಲಾಗಲೀ ಇದ್ದ ಬೀಟೆ ಮರವನ್ನು ಕಡಿದು ಅವರಿಗೆ ಸ್ವಂತ ಉಪಯೋಗಿಸಲು ಕಾನೂನಿನಲ್ಲಿ ಅವಕಾಶವಿರುವುದಿಲ್ಲ ಮತ್ತು ಈ ಬಗ್ಗೆ ಇಲಾಖೆಯವರೂ ಸಹ ಅನುಮತಿ ನೀಡಲು ಕಾನೂನಿನಲ್ಲಿ ಅವಕಾಶವಿರುವುದಿಲ್ಲ. ಈ ಬೀಟೆ ನಾಟಾವನ್ನು ವಾಹನದಲ್ಲಿ ಅಕ್ರಮವಾಗಿ ಸಾಗಿಸಲು ವಾಹನ ಮಾಲೀಕರು ಮತ್ತು ಅವರ ಪ್ರತಿನಿಧಿಗಳು ಭಾಗಿಯಾಗಿದ್ದರು ಎಂದು ಸಾಬೀತಾಗಿದೆ. ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆಂದು ಹಾಗೂ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಾಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿದೆ.

1. ಅರ್ಜಿದಾರರು 407 ವ್ಯಾನ್ ನಂ: ಕೆಎ-20-1617 ರಲ್ಲಿ ಬೀಟೆ ನಾಟಾ 29=0.863ಎಂ3ನ್ನು ದಿ:28-06-2001ರಂದು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ ?
2. ಕರ್ನಾಟಕ ಅರಣ್ಯ ವಿಧಿ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವ್ಯಾನಿನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಬೀಟೆಯನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನದ ಮಾಲೀಕರ ಅಥವಾ ಅವರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ಈ ವಾಹನವನ್ನು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ, ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ಹೌದು ಎಂದು, ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

**ಅಂಶ-1:**

ದಿ: 28-06-2001ರಂದು ವಲಯ ಅರಣ್ಯಾಧಿಕಾರಿ, ಸಾಗರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಆವಿನಹಳ್ಳಿ ಹೋಬಳಿ ಬೇದೂರು ಬಸ್ ನಿಲ್ದಾಣದ ಪಕ್ಕ ಪಂಚರ ಸಮಕ್ಷಮ ಕಾಯುತ್ತಿರುವಾಗ ಒಂದು 407 ಮಹೇಂದ್ರ ವ್ಯಾನ್ ಕೆಎ-20-1617ರಲ್ಲಿ ಬೀಟೆ ನಾಟಾ 29=0.863ಎಂ3 ನ್ನು ಇಲಾಖಾ ರಹದಾರಿ ಇಲ್ಲದೇ ಸಾಗಿಸುತ್ತಿದ್ದು, ಇದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಬೀಟೆ ನಾಟಾವನ್ನು ಮಹಜರ್ ಕ್ರಮ, ಪ್ರಥಮ ವರ್ತಮಾನ ವರದಿಯೊಂದಿಗೆ ಇಲಾಖಾ ಪರ ಅಮಾನತ್ತುಪಡಿಸಿ ಸಾಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 39/01-02ನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 62, 71(ಎ), 104(ಎ) ಪ್ರಕಾರ ಕೇಸು ದಾಖಲಿಸಿರುತ್ತಾರೆ. ಹಾಗೂ ಈ ನ್ಯಾಯಾಲಯಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಹಾಜರ್ಪಡಿಸಿರುತ್ತಾರೆ. ಈ ದಾಖಲೆಗೂ ಪ್ರಾಸಿಕ್ಯೂಷನ್ ಸಾಕ್ಷಿಗಳ ಹೇಳಿಕೆಗೂ ಒಂದಕ್ಕೊಂದು ಹೋಲಿಕೆಯಾಗದೆ. ವಾಹನ ಮಾಲೀಕರು ವಾಹನದಲ್ಲಿ ಬೀಟೆ ನಾಟಾ ಕಳ್ಳಸಾಗಾಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಈ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2:**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ನೀಲಿ ಬಣ್ಣದ ಮಹೇಂದ್ರ ವ್ಯಾನ್ ಕೆಎ-20 1617ರ ಮಾಲೀಕರೆಂದು ಶ್ರೀ ಸುನೀಲ್ ಜಾರ್ಜ್ ಬಿನ್ ಕೆ.ಎಂ. ಜಾರ್ಜ್, ಮರಿಯಾ ಪ್ಲಾಂಟೇಶನ್, ಕೊಪ್ಪ, ನೀಚಡಿ ಅಂಚೆ, ಸಾಗರ ತಾಲ್ಲೂಕು ಇವರು ದಿ:30-06-2001ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡಲು ಕೋರಿರುತ್ತಾರೆ. ಇವರ ಅರ್ಜಿಯ ಮೇರೆಗೆ ದಿ:02-07-2001ರಂದು ಕಾರಣ ಕೇಳಿ ಪತ್ರವನ್ನು ಈ ನ್ಯಾಯಾಲಯದಿಂದ ಜಾರಿಮಾಡಿರುತ್ತದೆ. ಮತ್ತು ಇವರ ಅರ್ಜಿಯನ್ನು ದಿ:16-12-2003ರಂದು ತಿರಸ್ಕರಿಸಿ ಆದೇಶವಾಗಿರುತ್ತದೆ. ನಂತರ ಡಿಫೆನ್ಸ್ ಕಡೆಯವರ ಹೇಳಿಕೆಯನ್ನು ಪಡೆದಿರುತ್ತದೆ. ಮತ್ತು ವಾದವನ್ನು ಮಂಡಿಸಲು ಅವಕಾಶ ನೀಡಲಾಗಿದೆ. ಈ ಪ್ರಕರಣದಲ್ಲಿ ವಾಹನ ಮಾಲೀಕರಿಗೆ ಅವರ ಅಹವಾಲು ಮಂಡಿಸಲು ಈ ನ್ಯಾಯಾಲಯ ಬಹಳಷ್ಟು ಕಾಲಾವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದರಿಂದ ಈ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-3:**

ವಲಯ ಅರಣ್ಯಾಧಿಕಾರಿ, ಸಾಗರ ಮತ್ತು ಸಿಬ್ಬಂದಿಯವರು ಆವಿನಹಳ್ಳಿ ಹೋಬಳಿ ಬೇದೂರು ಬಸ್ ನಿಲ್ದಾಣದ ಹತ್ತಿ ದಿ:28-06-2001ರಂದು ಬೆಳಗಿನ ಜಾವ 4 ಗಂಟೆಗೆ ಕಾಯುತ್ತಿರುವಾಗ ಒಂದು 407 ವ್ಯಾನ್ ಕೆಎ-20-1617ರಲ್ಲಿ ಬೀಟೆ ನಾಟಾ 29=0.863ಎಂ3ನ್ನು ಅಕ್ರಮವಾಗಿ ಸಾಗಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿ, ಮಹಜರ್

ವರದಿಯನ್ನು ಪಂಚರ ಸಹಿಯೊಂದಿಗೆ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಅಲ್ಲದೇ ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಈ ನ್ಯಾಯಾಲಯಕ್ಕೆ ಕೊಟ್ಟ ದಾಖಲೆಗಳಿಗೂ ಒಂದಕ್ಕೊಂದು ಹೋಲಿಕೆಯಾಗಿರುತ್ತದೆ. ಆದರೆ ಡಿಫೆನ್ಸ್ ಕಡೆಯವರು ಈ ನ್ಯಾಯಾಲಯಕ್ಕೆ ದಿ: 30-06-2001ರಂದು ಸಲ್ಲಿಸಿದ ಮನವಿ ಅರ್ಜಿಯಲ್ಲಿ ಈ ರೀತಿ ಕೋರಿರುತ್ತಾರೆ. ಈ ವಾಹನವನ್ನು ಸಾಲಮಾಡಿ ಖರೀದಿಸಿದ್ದೆಂದು, ಈ ವಾಹನಕ್ಕೆ ಚಾಲಕನನ್ನು ನೇಮಿಸಿದ್ದೆನೆಂದು ಮತ್ತು ಘಟನಾ ದಿನ ಸದರಿ ವಾಹನದಲ್ಲಿ ಸಾಮಿಲ್‌ನಿಂದ ಖರೀದಿಸಿದ ನಾಟಾಗಳನ್ನು ಚಿತ್ರದುರ್ಗಕ್ಕೆ ಸಾಗಿಸಲು ನಿಂತ ಖಾಲಿ ವಾಹನವನ್ನು ಅರಣ್ಯ ಇಲಾಖೆಯವರು ತೆಗೆದುಕೊಂಡು ಹೋಗಿ ಸುಳ್ಳು ಕೇಸು ದಾಖಲಿಸಿದ್ದಾರೆಂದು ಮತ್ತು ಈ ಪ್ರಕರಣದಲ್ಲಿ ವಾಹನ ಮಾಲೀಕರು ಭಾಗಿಯಾಗಿಲ್ಲವೆಂದು, ಭಾಧ್ಯತೆದಾರರು ಮುಗ್ದರು ಎನ್ನುವುದಕ್ಕೆ ಈ ವಾಹನದ ವಿಚಾರಣಾ ಕಾಲದಲ್ಲಿ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷಾಧಾರಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಈ ವಾಹನವನ್ನು ವಾಹನ ಮಾಲೀಕರಾಗಲೀ ಅವರ ಪ್ರತಿನಿಧಿಗಳಾಗಲೀ ಕಳ್ಳಸಾಗಾಣಿಕೆಗೆ ಉಪಯೋಗಿಸದಂತೆ ಮುನ್ನೆಚ್ಚರಿಕೆ ವಹಿಸಿರುವುದಿಲ್ಲವೆಂದು ಸಾಬೀತಾಗಿದೆ. ಆದ್ದರಿಂದ ಈ ಅಂಶದ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು, ಎರಡನೇ ಭಾಗ ಪ್ರಶ್ನೆಗೆ ಇಲ್ಲ ಎಂದು ಅಭಿಪ್ರಾಯಪಡುತ್ತೇನೆ.

**ಅಂಶ-4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮತ್ತು ಎರಡು ಕಡೆಯವರು ಈ ನ್ಯಾಯಲಯಕ್ಕೆ ಸಲ್ಲಿಸಿದ ದಾಖಲೆಗಳನ್ನು ಪರಿಸೀಲಿಸಿ, ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಸರ್ಕಲ್ ಪೋಲೀಸ್ ಇನ್ಸ್‌ಪೆಕ್ಟರ್, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ನೀಲಿಬಣ್ಣದ 407 ವ್ಯಾನ್ ಕೆಎ-20-1617(ಛಾಸ್ಸಿಸ್ ನಂ:357011830587, ಇಂಜಿನ್ ನಂ: 4975ಪಿ21577536) ನ್ನು ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 29=0.863ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶ ತೆರೆದ ನ್ಯಾಯಾಲಯದಲ್ಲಿ ನನ್ನ ಉತ್ತಲೇಖನದಲ್ಲಿ ಬರೆಯಿಸಿ ಗಣಕ ಯಂತ್ರದಲ್ಲಿ ಮುದ್ರಿಸಿ ಸರಿಪಡಿಸಿ ದಿನಾಂಕ:24-02-2007 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ಹೊರಡಿಸಿದೆ. ಈ ಆದೇಶ ಹೊರಡಿಸಿದ 30 ದಿನಗಳ ಒಳಗಾಗಿ ಯಾರು ಮೇಲ್ಮನವಿ ಹೋಗದೆ ಇದ್ದಲ್ಲಿ, ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್. 257 ಉಪ ಅರಣ್ಯ ಸಂರಕ್ಷಣಾಧಿಕಾರಿ
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3:ಅಮೊ:ವಾಹನ-20/06-07, ದಿನಾಂಕ: 03ನೇ ಮಾರ್ಚ್ 2007**

**ಉಪಸ್ಥಿತರು** : ಶ್ರೀ ಜಿ.ಜಯರಾಮಯ್ಯ ಭಾ.ಅ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಪಿರ್ಯಾಧಿದಾರರು** : ವಲಯ ಅರಣ್ಯಾಧಿಕಾರಿ,
ಸಾಗರ ವಲಯ, ಸಾಗರ
(ಸಹಾಯಕ ಸರ್ಕಾರಿ ಅಭಿಯೋಜಕರು)

**ಭಾದ್ಯತೆದಾರರು** : ಯಾರೂ ಮುಂದೆ ಬಂದಿಲ್ಲ.

**ಪ್ರಸ್ತಾವನೆ:-**

ದಿ: 05-11-2006ರಂದು ಸಾಗರ ವಲಯದ ಹೆಗ್ಗೋಡು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರು ದಿನದಂತೆ ಕರ್ತವ್ಯ ನಿರ್ವಹಿಸುತ್ತಿರುವಾಗ ಸಾಗರ ತಾಲ್ಲೂಕು ಆವಿನಹಳ್ಳಿ ಗ್ರಾಮಕ್ಕೆ ಸೇರಿದ ಆವಿನಹಳ್ಳಿಯಿಂದ ಸಾಗರಕ್ಕೆ ಬರುವ ರಸ್ತೆಯಲ್ಲಿ ಒಂದು ದ್ವಿಚಕ್ರ ವಾಹನ ಬರುತ್ತಿರುವುದನ್ನು ಅನುಮಾನದಿಂದ ವಾಹನ ಬೆನ್ನಟ್ಟಿದಾಗ ಸ್ವಲ್ಪದೂರ ಹೋದ ನಂತರ ಆಸಾಮಿಗಳು ವಾಹನ ಬಿಟ್ಟು ಪರಾರಿಯಾಗಿರುತ್ತಾರೆ. ನಂತರ ವಾಹನ ಪರಿಶೀಲಿಸಲಾಗಿ ಕೆಂಪು ಬಣ್ಣದ ಬಜಾಜ್ ಎಂ-80 ಕೆಎ-15-ಇ-2596 ಆಗಿದ್ದು, ಈ ವಾಹನದ ಮೇಲಿದ್ದ ಚೀಲದೊಳಗೆ ಸಣ್ಣ ಸಣ್ಣ ಶ್ರೀಗಂಧದ ಚಕ್ಕೆಗಳು 4 ಕೆ.ಜಿ. ಇದ್ದು, ಈ ಶ್ರೀಗಂಧವನ್ನು ಸಾಗಿಸಲು ರಹದಾರಿ ಇಲ್ಲದ ಕಾರಣ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ ಮತ್ತು ಜಪ್ತಿ ವರದಿಯೊಂದಿಗೆ ವಾಹನ ಮತ್ತು ಶ್ರೀಗಂಧವನ್ನು ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 62, 71(ಎ), 80, 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪನಿಯಮ 144ರ ಪ್ರಕಾರ ಸಾಗರ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 91/06-07ನ್ನು ದಾಖಲಿಸಿ, ನಂತರ ದಾಖಲಾತಿಗಳೊಂದಿಗೆ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸಾಗರ ವಲಯದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿದುಕೊಳ್ಳಲು ಈ ನ್ಯಾಯಾಲಯದ ಪತ್ರ ಸಮ ಸಂಖ್ಯೆ ದಿ: 25-11-2006ರಂದು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಪತ್ರ ಬರೆದು ಈ ವಾಹನದ ಬಿ ನಕಲನ್ನು

ಈ ನ್ಯಾಯಾಲಯಕ್ಕೆ ಒದಗಿಸಲು ಕೋರಲಾಗಿತ್ತು. ಈ ನ್ಯಾಯಾಲಯದ ಪತ್ರ ಸಮ ಸಂಖ್ಯೆ ದಿ: 18-12-2006ರಂದು ಪ್ರಕಟಣೆಯನ್ನು 30 ದಿನಗಳ ಕಾಲಾವಕಾಶ ನೀಡಿ ಹೊರಡಿಸಲಾಗಿತ್ತು. ಈ ಪ್ರಕಟಣೆಯು ದಿ:28-12-2006ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಈ ನಡುವೆ ಈ ವಾಹನದ ಬಿ ಪ್ರತಿಯನ್ನು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಸಾಗರ ಇವರು ದಿ: 22-01-2007ರಂದು ಈ ನ್ಯಾಯಾಲಯಕ್ಕೆ ಕಳುಹಿಸಿರುತ್ತಾರೆ. ಈ ಬಿ ಪ್ರತಿಯಂತೆ ಶ್ರೀ ಗುರುಪಾದ ಬಿನ್ ಮೂಟಪ್ಪ, ಹುಲಿಮನೆ, ಕಲ್ಮನೆ ಅಂಚೆ, ಸಾಗರ ತಾಲ್ಲೂಕು ಇವರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) (1) ರ ಪ್ರಕಾರ ಕಾರಣ ಕೇಳಿ ಪತ್ರವನ್ನು ವಲಯ ಅರಣ್ಯಾಧಿಕಾರಿ, ಸಾಗರ ಇವರ ಮುಖಾಂತರ ದಿ: 23-01-2007ರಂದು ಜಾರಿ ಮಾಡಿ ಈ ವಾಹನದ ಮೂಲ ದಾಖಲಾತಿಗಳನ್ನು ಕಾನೂನು ಬದ್ಧವಾಗಿ ಈ ನ್ಯಾಯಾಲಯಕ್ಕೆ 30 ದಿನಗಳೊಳಗಾಗಿ ಸಲ್ಲಿಸಲು ತಿಳಿಸಲಾಯಿತು. ನಿಗದಿತ ಸಮಯದೊಳಗೆ ಸಲ್ಲಿಸದೇ ಹೋದಲ್ಲಿ ವಾಹನ ಬಜಾಜ್ ಎಂ-80 ಕೆಎ-15-ಇ-2596 ಮತ್ತು ವಾಹನದೊಳಗಿದ್ದ ಶ್ರೀಗಂಧ 4 ಕೆ.ಜಿ.ಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಎಂದು ತಿಳಿಸಲಾಗಿತ್ತು. ಅದರಂತೆ ಈ ಕಾರಣ ಕೇಳಿ ಪತ್ರವನ್ನು ದಿ; 23-01-2007ರಂದು ಪಡೆದಿರುತ್ತಾರೆ. ಈ ಪತ್ರ ಪಡೆದು 30 ದಿನಗಳಾದರೂ ಈ ನ್ಯಾಯಾಲಯಕ್ಕೆ ಆರ್.ಸಿ. ಮಾಲೀಕರು ಹಾಜರಾಗದೇ, ಯಾವುದೇ ದಾಖಲೆಗಳನ್ನು ಹಾಜರ್ಪಡಿಸದೆ ತನ್ನ ವಾಹನವನ್ನು ಬಿಟ್ಟುಕೊಡುವಂತೆ ಕೋರಿರುವುದಿಲ್ಲ. ಇದರಿಂದ ಈ ವಾಹನವನ್ನು ಶ್ರೀಗಂಧ ಕಳ್ಳಸಾಗಾಣಿಕೆಗೆ ವಾಹನ ಮಾಲೀಕರು ಉಪಯೋಗಿಸಿರುವುದು ಸಾಬೀತಾಗಿದೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ: 24-02-2007ರಂದು ವಾದ ಮಂಡಿಸಿ ಈ ವಾಹನದಲ್ಲಿ ಶ್ರೀಗಂಧವನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಸಾಗರ ಇವರು ಮಹಜರ್ ವರದಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಶ್ರೀಗಂಧವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರ್ಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಶ್ರೀಗಂಧ ಸಣ್ಣ ಸಣ್ಣ ಚೆಕ್ಕೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ)ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತು ಮಾಡಿದ ದ್ವಿಚಕ್ರ ವಾಹನ ಬಜಾಜ್ ಎಂ-80 ಕೆಎ-15-ಇ-2596 (ಛಾಸ್ಸಿಸ್ ನಂ:16ಸಿ93ಸಿ111025, ಇಂಜಿನ್ ನಂ:16ಇ930ಸಿ10740) ಮತ್ತು ಈ ವಾಹನದಲ್ಲಿದ್ದ ಶ್ರೀಗಂಧ ಸಣ್ಣ ಸಣ್ಣ ಚೆಕ್ಕೆ 4 ಕೆ.ಜಿ.ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿ ದಿ:03-03-2007 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರೂ ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 306

## ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವಿಜಯಪುರ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಇವರ ಪತ್ರ ಸನಿ 47/ನೋಂದಣಿ ರದ್ದತಿ/15/2006-07 ದಿನಾಂಕ: 31.01.2007.
2. ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/71/06-07 ದಿನಾಂಕ: 4.11.06.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಕಚೇರಿಯಲ್ಲಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವಿಜಯಪುರ, ದೇವನಹಳ್ಳಿ ತಾಲ್ಲೂಕು ಈ ಸಂಘವು ಸಂ: ಎಆರ್ 47/ನೋಂದಣಿ/30121/2000-01 ದಿನಾಂಕ:29.11.2000 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವಿಜಯಪುರ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

ಆದೇಶ

**ನಂ.ಡಿಆರ್‌ಬಿ/ಆರ್/ನೋಂದಣಿ ರದ್ದತಿ/105/2006-2007, ದಿನಾಂಕ: 31ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ-69/ಸಿಎಲ್ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವಿಜಯಪುರ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂ:ಎಆರ್-47/ನೋಂದಣಿ/30121/2000-01 ದಿನಾಂಕ:29.11.2000ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ: 31.1.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್. 273 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚನ್ನರಾಯಪಟ್ಟಣ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಇವರ ಪತ್ರ ಸನಿ 47/ನೋಂದಣಿ ರದ್ದತಿ/16/2006-07 ದಿನಾಂಕ: 31.01.2007.
2. ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/74/06-07 ದಿನಾಂಕ: 4.11.06.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಕಚೇರಿಯಲ್ಲಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚನ್ನರಾಯಪಟ್ಟಣ, ದೇವನಹಳ್ಳಿ ತಾಲ್ಲೂಕು ಈ ಸಂಘವು ಸಂ: ಎಆರ್ 47/ನೋಂದಣಿ/30121/2000-01 ದಿನಾಂಕ:22.11.2000 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚನ್ನರಾಯಪಟ್ಟಣ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

ಆದೇಶ

**ನಂ.ಡಿಆರ್‌ಬಿ/ಆರ್/ನೋಂದಣಿ ರದ್ದತಿ/106/2006-2007, ದಿನಾಂಕ: 31ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ-69/ಸಿಎಲ್ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಚನ್ನರಾಯಪಟ್ಟಣ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂ:ಎಆರ್-47/ನೋಂದಣಿ/30120/2000-01 ದಿನಾಂಕ:22.11.2000ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ: 31.1.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್. 274 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವೆಂಕಟಗಿರಿ ಕೋಟೆ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಇವರ ಪತ್ರ ಸನಿ 47/ನೋಂದಣಿ ರದ್ದತಿ/13/2006-07 ದಿನಾಂಕ: 31.01.2007.
2. ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/69/06-07 ದಿನಾಂಕ: 4.11.06.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಕಚೇರಿಯಲ್ಲಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವೆಂಕಟಗಿರಿ ಕೋಟೆ, ದೇವನಹಳ್ಳಿ ತಾಲ್ಲೂಕು ಈ ಸಂಘವು ಸಂ: ಎಆರ್ 47/ನೋಂದಣಿ/30126/2000-01 ದಿನಾಂಕ:20.12.2000 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವೆಂಕಟಗಿರಿ ಕೋಟೆ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

**ನಂ.ಡಿಆರ್‌ಬಿ/ಆರ್/ನೋಂದಣಿ ರದ್ಧತಿ/107/2006-2007, ದಿನಾಂಕ: 31ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ-69/ಸಿಎಲ್‌ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ವೆಂಕಟಗಿರಿ ಕೋಟೆ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂ:ಎಆರ್-47/ನೋಂದಣಿ/30126/2000-01 ದಿನಾಂಕ:20.11.2000ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ: 31.1.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್. 275 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬೂದಿಗೆರೆ ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಇವರ ಪತ್ರ ಸನಿ 47/ನೋಂದಣಿ ರದ್ಧತಿ/17/2006-07 ದಿನಾಂಕ: 31.01.2007.
2. ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/75/06-07 ದಿನಾಂಕ: 4.11.06.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರ ಕಚೇರಿಯಲ್ಲಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬೂದಿಗೆರೆ, ದೇವನಹಳ್ಳಿ ತಾಲ್ಲೂಕು ಈ ಸಂಘವು ಸಂ: ಎಆರ್ 47/ನೋಂದಣಿ/30119/2000-01 ದಿನಾಂಕ:22.11.2000 ರಂತೆ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

**ನಂ.ಡಿಆರ್‌ಬಿ/ಆರ್/ನೋಂದಣಿ ರದ್ಧತಿ/108/2006-2007, ದಿನಾಂಕ: 31ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ-69/ಸಿಎಲ್‌ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಬೂದಿಗೆರೆ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂ:ಎಆರ್-47/ನೋಂದಣಿ/30119/2000-01 ದಿನಾಂಕ:20.11.2000ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ: 31.1.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್. 276 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ಕೂಲಿ ಒಪ್ಪಂದ ಮತ್ತು ನಿರ್ಮಾಣ ಸಹಕಾರ ಸಂಘ ನಿ., ಸೋಲೂರು, ಮಾಗಡಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಅಭಿವೃದ್ಧಿ ಅಧಿಕಾರಿ, ಮಾಗಡಿ ಇವರ ಪತ್ರ ಸಅಅಮಾ/ನೋಂದಣಿ ರದ್ಧತಿ/106/2006-07 ದಿನಾಂಕ: 20.12.2006.
2. ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/43/98-99 ದಿನಾಂಕ: 21.8.98.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ರವರ ಕಚೇರಿಯಲ್ಲಿ ಕೂಲಿ ಒಪ್ಪಂದ ಮತ್ತು ನಿರ್ಮಾಣ ಸಹಕಾರ ಸಂಘ ನಿ., ಸೋಲೂರು, ಮಾಗಡಿ ತಾಲ್ಲೂಕು ಈ ಸಂಘವು ಸಂ: ಜೆಡಿ/ಐಸಿಎಸ್/345/1963-64ರಲ್ಲಿ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಸಮಾಪನಾಧಿಕಾರಿಗಳ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಕೂಲಿ ಒಪ್ಪಂದ ಮತ್ತು ನಿರ್ಮಾಣ ಸಹಕಾರ ಸಂಘ ನಿ., ಸೋಲೂರು, ಮಾಗಡಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

**ನಂ.ಡಿಆರ್‌ಬಿ/ಆರ್/ನೋಂದಣಿ ರದ್ಧತಿ/109/2006-2007, ದಿನಾಂಕ: 31ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ-69/ಸಿಎಲ್‌ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಕೂಲಿ ಒಪ್ಪಂದ ಮತ್ತು ನಿರ್ಮಾಣ ಸಹಕಾರ ಸಂಘ ನಿ., ಸೋಲೂರು, ಮಾಗಡಿ ತಾಲ್ಲೂಕು ಈ ಸಂಘದ ನೋಂದಣಿ ಸಂ: ಜೆಡಿ/ಐಸಿಎಸ್/345/1963-64ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ: 31.1.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 277

**ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ:** ಸಮಾಪನೆಗೊಂಡ ಅಖಿಲಷಾಹಿ ಲ್ಯಾಕರ್ ವೇರ್ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಾಯಕ ನಿಬಂಧಕರು, ರಾಮನಗರ ಇವರ ಪತ್ರ ಸನಿ 46/ಸಮಾಪನೆ/42/2004-05 ದಿನಾಂಕ: 24.01.07.
2. ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ/ಆರ್/ಎಲ್‌ಕ್ಯೂಡಿ/170/84-85 ದಿನಾಂಕ: 31.12.1984.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ರವರ ಕಚೇರಿಯಲ್ಲಿ ಅಖಿಲಷಾಹಿ ಲ್ಯಾಕರ್ ವೇರ್ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು ಈ ಸಂಘವು ಸಂ: ಡಿಆರ್‌ಸಿಎಸ್/102/3012/1948-49 ದಿನಾಂಕ:12.2.1949 ರಲ್ಲಿ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (2)ರ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಅದರಂತೆ ಉಲ್ಲೇಖ (1)ರ ಸಹಾಯಕ ನಿಬಂಧಕರು, ರಾಮನಗರ ಪತ್ರದಲ್ಲಿ ಸದರಿ ಸಂಘದ ಆಸ್ತಿ ಜವಾಬ್ದಾರಿಗಳು ಶೂನ್ಯಗೊಂಡಿರುವುದಾಗಿ (ಹೊಂದಾಣಿಕೆ ಮಾಡಿಕೊಂಡು) ತಿಳಿಸಿರುತ್ತಾರೆ. ಮತ್ತು ಸರ್ಕಾರಕ್ಕೆ ಬಾಕಿ ಇದ್ದ ಷೇರು ಧನ ರೂ.5000/- ಗಳನ್ನು ಪಾವತಿಸಿದ್ದು ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಆದ್ದರಿಂದ ಈ ಸಂಘವನ್ನು ಮುಂದುವರಿಸಿದರೆ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನವಿಲ್ಲದ ಕಾರಣ ಸದರಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಉಲ್ಲೇಖ (1)ರ ಪತ್ರದಲ್ಲಿ ತಿಳಿಸಿರುವ ಮೇರೆಗೆ ಅಖಿಲಷಾಹಿ ಲ್ಯಾಕರ್ ವೇರ್ ಸಹಕಾರ ಸಂಘ ನಿ., ಚನ್ನಪಟ್ಟಣ, ದೇವನಹಳ್ಳಿ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

**ನಂ.ಡಿಆರ್‌ಬಿ/ಆರ್/ನೋಂದಣಿ ರದ್ಧತಿ/110/2006-2007, ದಿನಾಂಕ: 31ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ-69/ಸಿಎಲ್‌ಎಂ/2001, ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಬಿ.ಎಸ್. ಹರೀಶ್, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಅಖಿಲಷಾಹಿ ಲ್ಯಾಕರ್ ವೇರ್ ಸಹಕಾರ ಸಂಘ ನಿ., ಚನ್ನಪಟ್ಟಣ ತಾಲ್ಲೂಕು ಈ ಸಂಘದ ನೋಂದಣಿ ಸಂ:ಡಿಆರ್‌ಸಿಎಸ್/102/3012/1948-49 ದಿನಾಂಕ:12.2.1949ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಚೇರಿಯ ಮುದ್ರೆಯೊಂದಿಗೆ ದಿನಾಂಕ: 31.1.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 278

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದ.ಕ. ಉಪ ವಿಭಾಗ-2**

**ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು-ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್-29/2007 F ದಿನಾಂಕ: 26ನೇ ಫೆಬ್ರವರಿ 2007**

**ಅರ್ಜಿದಾರರು:**
1. ಮೋನಪ್ಪ ಗೌಡ ಪ್ರಾಯ 70 ವರ್ಷ ಮೃತರ ತಂದೆ
2. ಉಮಕ್ಕ ಮೋನಪ್ಪ ಗೌಡರ ಪತ್ನಿ ಮೃತರ ತಾಯಿ, 60 ವರ್ಷ ಪ್ರಾಯ
3. ಬಬಿತಾ, ಪ್ರಾಯ 23 ವರ್ಷ ಮೃತರ ಸಹೋದರಿ ಪಂಚೋಡಿ ಪಾಲ್ತಾಡಿ ಗ್ರಾಮ ಪುತ್ತೂರು ತಾಲ್ಲೂಕು

**ವಿರುದ್ಧ**

**ಪ್ರತಿವಾದಿಗಳು:**
ಕಾರ್ಯನಿರ್ವಾಹಕ ಅಭಿಯಂತರರು (ವಿ) ಮೆಸ್ಕಾಂ
ಉಪವಿಭಾಗ
ಪುತ್ತೂರು ತಾಲ್ಲೂಕು ದ.ಕ. 574 201

**ಅಧಿಸೂಚನೆ**

ಅರ್ಜಿದಾರಳಾದ ಶ್ರೀ ಮೋನಪ್ಪ ಗೌಡ ಇವರು ತಮ್ಮ ಮಗನಾದ ಶ್ರೀ ವೆಂಕಪ್ಪ ಗೌಡ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 13.7.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯ ಪತ್ರದಲ್ಲಿ

